# ಕರ್ನಾಟಕದಲ್ಲಿ

# ಸ್ವಾತಂತ್ರ್ಯ ಸಂಗ್ರಾಮ




೧೮೦೦ ರಿಂದ ೧೮೫೭ ರವರೆಗೆ



# ಕರ್ಣಾಟಕದಲ್ಲಿ

# ಸ್ವಾತಂತ್ರ್ಯ ಸಂಗ್ರಾಮ



೧೮೦೦ ರಿಂದ ೧೮೫೭ ರವರೆಗೆ



ಲೇಖಕರು :
ತಿರುಮಲ ತಾತಾಚಾರ್ಯ ಶರ್ಮ

ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಸಂಗ್ರಾಮ ಇತಿಹಾಸ ಸಮಿತಿ
ಬೆಂಗಳೂರು




ಪ್ರಕಾಶಕರು :
ಮೈಸೂರು ಸಂಸ್ಥಾನದ ಸರಕಾರ, ಬೆಂಗಳೂರು

# ವಿಷಯಾನುಕ್ರಮಣಿಕೆ

೧. ಸಂದೇಶಗಳು

(೧) ಮಾನ್ಯ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು,
ಮುಖ್ಯ ಮಂತ್ರಿಗಳು.

(೨) ಮಾನ್ಯ ಶ್ರೀ ವಿ. ವೆಂಕಟಪ್ಪನವರು,
ಶಿಕ್ಷಣ ಶಾಖಾ ಮಂತ್ರಿಗಳು.



೨. ೧೮೦೦ ರಿಂದ ೧೮೫೭ರ ವರೆಗೆ

ಪುಟ

೧. ಬಿದನೂರಲ್ಲಿ ಧೋಂಡಿಯ ವಾಘ್ . . . . . ೩
೨. ಐಗೂರು ವೆಂಕಟಾದ್ರಿನಾಯಕ . . . . . ೭
೩. ಶಿಂದಗಿಯ ಕ್ರಾಂತಿಕಾರರು . . . . . ೮
೪. ರಾಣಿ ಕಿತ್ತೂರು ಚೆನ್ನಮ್ಮ . . . . . ೯
೫. ಸಂಗೊಳ್ಳಿ ರಾಯ ನಾಯಕ . . . . . ೧೭
೬. ಕೊಡಗು ಮತ್ತು ಕೆನರಾ ಬಂಡಾಯ . . . . ೨೬
೭. ಬಾದಾಮಿಯ ಬಂಡಾಯ . . . . . ೪೩

ಅನುಬಂಧ

ಸಂಗೊಳ್ಳಿ ರಾಯಣ್ಣ ನಾಯಕನ ಲಾವಣಿ . . ೪೫
—ಹೆಬ್ಬಳ್ಳಿ ಬಸವಕವಿ.

೩. ೧೮೫೭-೫೮ ರಲ್ಲಿ

೧. ಸುರಪುರದ ಚಿಕ್ಕವೆಂಕಟಪ್ಪ ನಾಯಕ . . . . ೬೪
೨. ನರಗುಂದದ ಬಂಡಾಯ . . . . ೭೮
೩. ರಣವಿಕ್ರಾಂತ ಭೀಮರಾವ ಮುಂಡರಗಿ . . . ೮೬
೪. ಹಲಗಲಿಯ ಮಹಾವೀರರು . . . . . ೯೭

ಅನುಬಂಧ

1. Declaration made by Bheema Rao Gumasta of Mundarigi Bheema Rao . . . ೧೦೨
2. Proclamation of Pant Pradan Pant Nana Peshwa. ೧೦೫
3. Prisoners taken at Koppal . . . . ೧೦೭
4. Bheema Rao's Rising in 1858 . . . . ೧೦೮
5. Bheema Rao's Property . . . . ೧೦೯
6. ಭೀಮರಾಯನ ಬಂಡಾಯದ ಲಾವಣಿ . . . . ೧೧೦

೪. ಚಿತ್ರಗಳು

(೧) ಕರ್ಣಾಟಕದಲ್ಲಿ ಬಂಡಾಯಗಳಾದ ಕ್ಷೇತ್ರಗಳು.
(೨) ಕಿತ್ತೂರು ರಾಣಿ ಚೆನ್ನಮ್ಮ.
(೩) ಸಂಗೊಳ್ಳಿ ರಾಯಣ್ಣನ ಸಮಾಧಿ.
(೪) ಸುರಪುರದ ವೆಂಕಟಪ್ಪನಾಯಕ.
(೫) ಸುರಪುರ ಕೋಟೆಯ ಮಹಾದ್ವಾರ.
(೬) ನರಗುಂದದ ದೇಸಾಯಿ ಬಾಬಾ ಸಾಹೇಬ.
(೭) ಕೊಪ್ಪಳದ ಕೋಟೆ.



# ಲೇಖಕನ ಬಿನ್ನಹ

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ (೧೮೫೭) ಶತಮಾನೋತ್ಸವ ಸಮಾರಂಭದ ಸಂತೋಷ ಸಮಯವಿದು. ಈ ದಿನವೇ ಹೊಸ ಮೈಸೂರು ಸಂಸ್ಥಾನದಲ್ಲಿ ಅಥವಾ ಕರ್ಣಾಟಕದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮೇತಿ ಹಾಸದ ಮೊದಲನೆಯ ಸಂಪುಟವನ್ನು (೧೭೬೦-೧೯೨೦) ಪ್ರಕಟಿಸ ಬೇಕೆಂಬ ಪ್ರಯತ್ನ ನಡೆಯಿತು. ಕಾರಣಾಂತರಗಳಿಂದ ಆ ಪ್ರಯತ್ನ ಸಫಲ ವಾಗಲಿಲ್ಲ. ಆದರೂ ಈ ಉತ್ಸವ ಸಮಯದ ಪವಿತ್ರತೆಯನ್ನರಿತು, ಸಮಯ ಗೌರವದ ಕಾಣಿಕೆಯ ಸಂಕೇತವಾಗಿ, ಈ ಪ್ರಕಟನೆಯನ್ನು ಜನತೆಯ ಮುಂದಿಡ ಲಾಗಿದೆ.

ಕನ್ನಡನಾಡು ಎರಡು ಶತಮಾನಗಳಿಂದಲೂ (೧೭೫೭-೧೯೪೭) ಬ್ರಿಟಿಷ್ ವಿರುದ್ಧವಾಗಿ ನಿಂತು, ಸ್ವಾತಂತ್ರ್ಯ ಸಂಪಾದನೆಗಾಗಿ ಹೋರಾಡುತ್ತ ಬಂತು. ಈ ಸಂಗ್ರಾಮ ಸ್ವರೂಪವು ನಾನಾ ಘಟ್ಟಗಳಲ್ಲಿ ನಾನಾ ರೂಪ ಹೊಂದಿದೆ. ನಾನಾ ಘಟ್ಟಗಳಲ್ಲಿ ಈ ನಾಡಿನ ಜನರು ನಾನಾ ಉದ್ದೇಶಗಳನ್ನು, ಆದರ್ಶಗಳನ್ನು, ಲಕ್ಷ್ಯದಲ್ಲಿಟ್ಟುಕೊಂಡಿದ್ದಾರೆ; ನಾನಾ ಕಾರ್ಯ ಸಾಧಕ ತಂತ್ರಗಳನ್ನು ಆಶ್ರಯಿಸಿ ದ್ದಾರೆ. ಎಲ್ಲ ಘಟ್ಟಗಳಲ್ಲೂ ಜನರು ಧೈರ್ಯ, ಸ್ಥೈರ್ಯ ತೋರಿಸಿದ್ದಾರೆ; ತ್ಯಾಗ, ಬಲಿದಾನ, ಮಾಡಿದ್ದಾರೆ. ‘ಆಱಂಕುಸಮಿಟ್ಟೊಡಂ ನೆನೆವುದೆನ್ನಮನಂ ಬನವಾಸಿ ದೇಶಮಂ’ ಎಂದಲ್ಲವೆ ಸಾವಿರ ವರ್ಷಗಳ ಹಿಂದೆ ಮಹಾಕವಿ ಪಂಪ ಹಾಡಿದ್ದು! ಕನ್ನಡನಾಡಿನ ಜನರು ಅಭಿಮಾನ ಧನರು; ಅವರ ದೇಶಭಕ್ತಿಯ ಗುಣದ ಬಣ್ಣ ತಲೆದೂಗತಕ್ಕದ್ದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಈ ನಾಡಿನ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯನ್ನು ನಾಲ್ಕು ಪರ್ವಗಳಾಗಿ ವಿಂಗಡಿಸಬಹುದು. ಮೊದಲನೆಯ ಪರ್ವದಲ್ಲಿ (೧೭೬೦-೧೮೦೦) ತಂದೆ ಮಕ್ಕಳಿಬ್ಬರು (ಹೈದರ್-ಟೀಪು) ಪರದೇಶಿಗಳಿಂದ, ಮುಖ್ಯವಾಗಿ ಬ್ರಿಟಿಷರಿಂದ ಭಾರತವನ್ನು ಉಳಿಸಬೇಕೆಂದೂ, ಅವರನ್ನು ಈ ದೇಶದಿಂದ ಓಡಿಸಬೇಕೆಂದೂ, ದೂರದೃಷ್ಟಿಯುತರಾಗಿ, ಆಲೋಚನೆಮಾಡಿ, ಸಂಕಲ್ಪಮಾಡಿ, ಹೋರಾಡಿದರು. ತಕ್ಕಮಟ್ಟಿಗೆ ಯಶಸ್ವಿಗಳೂ ಆದರು. ತಂದೆ ಹೈದರ್ ವಿಜಯಸ್ಕಂಧಾವಾರದಲ್ಲೇ ದೇಹವನ್ನು ತ್ಯಜಿಸಿದ. ಮಗ ಟೀಪುವಾದರೋ ಶ್ರೀರಂಗಪಟ್ಟಣದ ಕೋಟೆಯ ಉತ್ತರ ದ್ವಾರದ ರಣಭೂಮಿಯಲ್ಲಿ, ವೀರಾವೇಶದಿಂದ ಹೋರಾಡುತ್ತ, ಬಿದ್ದು, ಸತ್ತು, ಸ್ವರ್ಗಾಲಯಕ್ಕೇರಿದ! ಶ್ರೀರಂಗಪಟ್ಟಣದ ಪತನವೆಂದರೆ ಮೈಸೂರಿನ-ಕರ್ಣಾಟಕದ ಸ್ವಾತಂತ್ರ್ಯ ವಿನಾಶ.

"The brave defence of Mysore, and the heroic death of its Sultan in 1799 had set noble examples of National exertion, and served as an inspiration to other spirits who were in mortal peril at the encroachments of the British power."

ಎಂಬದಾಗಿ ಶಶಿಭೂಷಣ ಚೌಧರಿಯವರು ಹೇಳುತ್ತಾರೆ. ರಾಷ್ಟ್ರೀಯ ಭಾವನೆಯ ಮತ್ತು ಶಕ್ತಿಯ ಅಂಕುರಾರ್ಪಣಪರ್ವವೆಂದು ಇದನ್ನು ಕರೆಯಬಹುದು.

ಎರಡನೆಯ ಪರ್ವದಲ್ಲಿ ಕರ್ಣಾಟಕದಲ್ಲಿ ಮಾತ್ರವಲ್ಲ, ವಿಶಾಲ ಭಾರತದಲ್ಲೇ ವೀರಸ್ವರ್ಗವಾಸಿ ಸುಲ್ತಾನನ ಬಲಿದಾನದ ಫಲವು ಕಂಡುಬರುತ್ತದೆ. ೧೮೦೦ ರಿಂದ ೧೮೫೭ ರೊಳಗಾಗಿ ಭಾರತದ ನಾನಾ ಕಡೆಗಳಲ್ಲಿ ೭೦ಕ್ಕೂ ಮೀರಿದ ಪ್ರತಿಭಟನೆಗಳೇಕೆ, ಸಂಗ್ರಾಮಗಳೇ ನಡೆದಿವೆ. ಈ ಕಾಲದ ಪರಿಸ್ಥಿತಿಯನ್ನು ಚಿತ್ರಿಸುತ್ತ ಸರ್ ಜಾರ್ಜ್ ಷೋರನು—

> "I have lived long enough among the people of India to witness their sufferings and to become acquainted in some measure with their feelings . . . . and I am convinced that a crisis is not far distant."

ಎಂಬದಾಗಿ ಹೇಳಿದ. ಕನ್ನಡ ನಾಡಿನಲ್ಲೇ ಆರೇಳು ಪ್ರಕರಣಗಳ ಉದಾಹರಣೆಗಳಿವೆ. ಇದು ಭಾರತದ ಮಹಾವಿಪ್ಲವದ ಪೂರ್ವಸಿದ್ಧತಾಪರ್ವ. ೫೦ ವರ್ಷಗಳ ಈ ದ್ವಿತೀಯ ಘಟ್ಟದ, ತ್ಯಾಗ, ಪರಾಕ್ರಮಗಳು ೧೮೫೭ನೆಯ ಮಹಾಕ್ರಾಂತಿಗೆ ದಾರಿಮಾಡಿದುವು.

ಮೂರನೆಯ ಘಟ್ಟದಲ್ಲಿ ಕನ್ನಡನಾಡು ಸಹ ವಿಶಾಲ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಕ್ಕ ಪಾತ್ರವಹಿಸಿ, ಕೃತಕೃತ್ಯತೆಯನ್ನು ಪಡೆಯಿತು. ಈ ಘಟ್ಟದಲ್ಲಿ ಸುರಪುರದ ಚಿಕ್ಕವೆಂಕಟಪ್ಪನಾಯಕ, ನರಗುಂದದ ಬಾಬಾ ಸಾಹೇಬರಂತಹ ರಾಜವರ್ಗದವರು ಮಾತ್ರವಲ್ಲ, ಮುಂಡರಗಿ ಭೀಮರಾಯನಂತಹ ವೀರನನ್ನೂ, ಹಲಗಲಿಯ ಸಾಮಾನ್ಯ ಜನರ, ಬೇಡರ ಸತ್ಯಪರಾಕ್ರಮಗಳನ್ನೂ ನೋಡುತ್ತೇವೆ. ನಾಲ್ಕನೆಯ ಘಟ್ಟದ ಸ್ವಾತಂತ್ರ್ಯ ಸಂಗ್ರಾಮದ ಸ್ವರೂಪವನ್ನೇ ಮಹಾತ್ಮ ಗಾಂಧಿಯವರು ಪರಿವರ್ತನಗೊಳಿಸಿಬಿಟ್ಟರು.

೧೮೫೭-೫೮ ರಲ್ಲಿ ಮುಂಬಯಿ ಕರ್ಣಾಟಕದಲ್ಲೂ, ಹೈದರಾಬಾದ್ ಕರ್ಣಾಟಕದಲ್ಲೂ, ಸ್ವಾತಂತ್ರ್ಯ ಸಂಗ್ರಾಮದ ಹಲವು ಪ್ರಕರಣಗಳನ್ನು ಕಾಣುವೆವು. ಆದರೆ ಹಳೆಯ ಮೈಸೂರು ಸಂಸ್ಥಾನದಲ್ಲಿ ಏನೂ ಆಗಲಿಲ್ಲವೆಯೆಂಬ ಪ್ರಶ್ನೆಯು ಸಹಜವಾಗಿ ಏಳುತ್ತದೆ.

ನಾನಾರಾಯನು ಮುಮ್ಮಡಿಕೃಷ್ಣರಾಜ ಒಡೆಯರವರಿಗೆ ಪತ್ರವೊಂದನ್ನು ಬರೆದಿದ್ದನೆಂದು ಬೇರೆ ಮೂಲಗಳಿಂದ ತಿಳಿದು ಬಂದಿದೆ. ಇದರ ಆಧಾರದ ಮೇಲೆ ಕೇಂದ್ರ ಸಂಪಾದಕ ಮಂಡಲಿಯ ಕಾರ್ಯದರ್ಶಿಗಳಾಗಿದ್ದ ಶ್ರೀ ಘೋಷರವರು ನನಗೆ ಪತ್ರ ಬರೆದು 'ಈ ಪತ್ರ ಕುರಿತು ಶೋಧನೆ ಮಾಡಿ' ರೆಂದು ಕೇಳಿದರು. ನಾನು ಅರಮನೆ ಅಧಿಕಾರಿಗಳೊಂದಿಗೆ ಪತ್ರವ್ಯವಹಾರ ನಡೆಸಿದೆ; ಮುಖತಃ ಮಾತನಾಡಿದೆ. ಹಿಂದೆ ಅರಮನೆಗೆ ಬೆಂಕಿ ಬಿದ್ದಾಗ ಹಳೆಯ ಕಾಗದ ಪತ್ರಗಳೆಲ್ಲ ಸುಟ್ಟು ಹೋದವೆಂಬದಾಗಿ ಉತ್ತರ ಬಂತು. ಅದೃಷ್ಟವಶಾತ್ 'ನಾನಾ ಪತ್ರ' ಸಿಕ್ಕಿದ್ದರೆ ಆ ಕಾಲದ ಮೈಸೂರಿನ ಚರಿತ್ರೆಯ ಮೇಲೆ ಹೊಸ ಬೆಳಕು ಬೀಳುತ್ತಿತ್ತು.

ಮತ್ತೊಂದು ವಿಚಾರ; ೧೮೫೭ ಸುಮಾರಿನಲ್ಲಿ ನಾನಾರಾಯನ ಪ್ರತಿನಿಧಿ-ಪ್ರಚಾರಕರನೇಕರು ಮೈಸೂರು ದೇಶದಲ್ಲಿ ಸುತ್ತಾಡುತ್ತಿದ್ದ ಸಂಗತಿಗಳನೇಕ ತಿಳಿದು ಬಂದಿವೆ. ನಾನಾ ಸ್ವಯಂ ಬೆಂಗಳೂರಿಗೇ ಬಂದು, ಚಿಕ್ಕಪೇಟೆ ಕಾಶಿ ವಿಶ್ವೇಶ್ವರ ದೇವಾಲಯದಲ್ಲಿ ಕೆಲವು ದಿನಗಳು ರಹಸ್ಯವಾಗಿದ್ದಂತೆ ಅನೇಕರ ಬಾಯಿಂದ ನಾನು ಕೇಳಿದ್ದೇನೆ. ಕೇಂದ್ರ ಸರ್ಕಾರದ ಆರೋಗ್ಯ ಸಚಿವರಾದ ಶ್ರೀ ಡಿ. ಪಿ. ಕರಮರಕರವರು ಈ ರೀತಿಯಾಗಿ ಹೇಳಿದರು—"೧೮೫೭ ಸುಮಾರಿನಲ್ಲಿ ಬ್ರಹ್ಮಗಿರಿ ಬುವಾ ಎಂಬ ಸಾಧುವೊಬ್ಬನನ್ನು ಬ್ರಿಟಿಷ್ ಕಮಿಷನರು ಬೆಂಗಳೂರಲ್ಲಿ ಬಂಧಿಸಿದರು. ಕಮಿಷನರೇ ಆ ಸಾಧುವಿನ ಹೇಳಿಕೆಯನ್ನು ಬರೆದಿಟ್ಟಿದ್ದಾರೆ. ಆ ಹೇಳಿಕೆಯನ್ನು ನಾನು ದೆಹಲಿಯ 'ನ್ಯಾಷನಲ್ ಆರ್ಕೀವ್ಸ್'ನಲ್ಲಿ ನೋಡಿದೆ. ಅಲ್ಲಿನ ಅಧಿಕಾರಿಗಳಿಗೆ ಬರೆಯಿರಿ."

ಸಂಬಂಧಪಟ್ಟ ಅಧಿಕಾರಿಗಳಿಗೆ ಬರೆದೆ. ಕಡೆಯ ಪತ್ರದಲ್ಲಿ ಅವರು 'ತಕ್ಷಣ ಕೈಗೆ ಸಿಗುವಹಾಗಿಲ್ಲ' ಎಂದು ಉತ್ತರ ಕೊಟ್ಟರು. ಮತ್ತೆ ನಾನು ಆ ಅಧಿಕಾರಿಗಳಿಗೆ ತಂತೀ ವರ್ತಮಾನ (೬-೮-೧೯೫೭) ಕೊಟ್ಟು 'ತಕ್ಷಣ, ಹುಡುಕಿ, ಕಳುಹಿಸಿಕೊಡಿ. ಅಗತ್ಯವಾಗಿ ಅದು ಬೇಕಾಗಿದೆ' ಎಂದು ತಿಳಿಸಿದೆ. ಇಂದಿನವರೆಗೂ ಆ ಕಡೆಯಿಂದ ಉತ್ತರವಿಲ್ಲ. ಬ್ರಹ್ಮಗಿರಿ ಬುವಾ ಹೇಳಿಕೆ ಸಿಕ್ಕಿದ್ದರೆ ಅಂದಿನ ಮೈಸೂರು ರಾಜಕೀಯ ಜೀವನದ ಪರಿಯನ್ನು ತಕ್ಕಮಟ್ಟಿಗೆ ತಿಳಿದುಕೊಳ್ಳಬಹುದಾಗಿತ್ತು.

ಅಠಾರಾ ಕಚೇರಿಯ 'ರೆಕಾರ್ಡ್' ಶಾಖೆಯಲ್ಲಿ ಒಂದು ಕಡತವಿತ್ತೆಂದೂ, ಮಹಾತ್ಮನೆಂಬಾತ ಕಮಿಷರ್ ಕಾಲದಲ್ಲಿ ೧೮೫೭ನೆಯ ವಿಪ್ಲವ ಕುರಿತು ಭವಿಷ್ಯ ಹೇಳಿದ್ದನೆಂದೂ, 'ಕಮಿಷನರು' ಅವನನ್ನು ಬರಮಾಡಿಕೊಂಡು, ಭವಿಷ್ಯ ವಿವರಗಳನ್ನೆಲ್ಲ ಬರೆಸಿ, ತಿಳಿದುಕೊಂಡು, ಪರಿಹಾರೋಪಾಯಗಳನ್ನು ಕೈಕೊಂಡರೆಂದೂ, ಆ ಕಡತವನ್ನು ಓದಿದ್ದ ಹಿರಿಯ ಅಧಿಕಾರಿಗಳೊಬ್ಬರು ನನಗೆ ಹೇಳಿದರು. ಆ ಕಡತ ಹುಡುಕಲು ವಿಶೇಷ ಪ್ರಯತ್ನ ಮಾಡಿದೆ. ಪ್ರಯೋಜನವಾಗಲಿಲ್ಲ.

ಕನ್ನಡನಾಡಿನಲ್ಲಿ ಸ್ವಾತಂತ್ರ್ಯ ಸಾಧನೆಗಾಗಿ ನಡೆದ ಪ್ರಯತ್ನಗಳು ಅಸಂಖ್ಯಾತವಾಗಿರಬೇಕು. ಅನೇಕ ಮಂದಿ ವೀರರೂ, ವೀರರಮಣಿಯರೂ, ಸ್ವಾತಂತ್ರ್ಯಕ್ಕಾಗಿ ಹೋರಾಡಿರಬೇಕು. ಸಂಬಂಧಪಟ್ಟ ಸಾಕ್ಷ್ಯ ಸಾಹಿತ್ಯ ನಮ್ಮ ಕಣ್ಣಿಗೆ ಬೀಳುತ್ತಿಲ್ಲ. ಈ ಕ್ಷೇತ್ರದಲ್ಲಿ ವಿಶೇಷ ಸಂಶೋಧನೆ ನಡೆಯಬೇಕಾಗಿದೆ. ಹಾಗೆ ನಡೆದಾಗ ಕನ್ನಡನಾಡಿನ ಚರಿತ್ರೆಯ ಈ ಭಾಗವು ಪೂರ್ಣವೆನಿಸೀತು.

ಈ ಪ್ರಕಟನೆಗಾಗಿ ತಮ್ಮ ಒಪ್ಪಿಗೆಯನ್ನಿತ್ತ ಸಮಿತಿಯವರಿಗೆ ಧನ್ಯವಾದಗಳು. ಈ ಸಂದರ್ಭದಲ್ಲಿ ಸಂದೇಶಗಳನ್ನು ಕೃಪೆಮಾಡಿದ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರಿಗೂ, ಶಿಕ್ಷಣ ಶಾಖಾ ಮಂತ್ರಿಗಳಾದ ಶ್ರೀ ವಿ. ವೆಂಕಟಪ್ಪನವರಿಗೂ ಕೃತಜ್ಞನಾಗಿದ್ದೇನೆ.

೧೫-೮-೧೯೫೭,
ಬೆಂಗಳೂರು.

ತಿ. ತಾ. ಶರ್ಮ.

# ದಂಗೆಗಳೇ ಸಾಮ್ರಾಜ್ಯ ಲಾಂಛನ.

೧೭೯೯ರಲ್ಲಿ ಶ್ರೀರಂಗಪಟ್ಟಣದ ಪತನವಾಯಿತು. ಅಷ್ಟುಮಾತ್ರದಿಂದ ಮೈಸೂರು ರಾಜ್ಯದ ಮೇಲೆಲ್ಲ ಬ್ರಿಟಿಷರ ಪ್ರಭುತ್ವ ಸ್ಥಾಪಿತವಾಗಲಿಲ್ಲ. ಆ ರಾಜ್ಯದ ಪ್ರಜೆಗಳೆಲ್ಲ ತೆಪ್ಪಗಾಗಿ ಬ್ರಿಟಿಷರಿಗೆ ತಲೆಬಾಗಲಿಲ್ಲ. ಮಹದಾಶಯದಿಂದ ಕೂಡಿದ ಅರಸರೂ, ಅನೇಕ ಪಾಳೆಯಗಾರರೂ, ಪರದೇಶಿಗಳು ಭಾರತದಲ್ಲಿ ಪ್ರಭುತ್ವ ಹೂಡಿ, ಬೇರೂರದಂತೆ ಮಾಡಲು ಪ್ರಬಲವಾಗಿ ಪ್ರತಿಭಟಿಸಿದರು. ಪ್ಲಾಸಿಯ ಕದನಾನಂತರ (೧೭೫೭) ನೂರು ವರ್ಷಗಳಕಾಲ ಭಾರತದಲ್ಲೆಲ್ಲ ನಡೆದ ಕದನ ಕೋಲಾಹಲಗಳನ್ನು ವಿವರಿಸುತ್ತಾ ಎಸ್. ಬಿ. ಚೌಧರಿಯವರು ಹೀಗೆ ಹೇಳುತ್ತಾರೆ:

> "ಪ್ರಭುತ್ವಾಧಿಕಾರವನ್ನು ಪ್ರಬಲವಾಗಿ ಪ್ರತಿಭಟಿಸುವ ಪ್ರಕರಣಗಳು ಮೇಲಿಂದ ಮೇಲೆ ತಲೆಹಾಕಿದುದನ್ನು ನೋಡಿದರೆ ಸಾರ್ವಜನಿಕ ಅಪ್ರಿಯತೆಯ ಗುಪ್ತಗಾಮಿನಿಯ ಪ್ರವಾಹ ಬಲಯುತವಾಗಿತ್ತೆಂದೂ, ಸಾಮಾನ್ಯವಾಗಿ ಇದೇ ಬ್ರಿಟಿಷ್ ಸಾಮ್ರಾಜ್ಯ ಲಾಂಛನವಾಗಿತ್ತೆಂದೂ ಕಂಡುಬರುತ್ತದೆ."[1]

ಈ ಮಾತು ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದ ಕರ್ಣಾಟಕಕ್ಕಾದರೂ ಚೆನ್ನಾಗಿ ಒಪ್ಪುತ್ತದೆ. ಈ ಮಾತು ನಿಜವೆಂಬುದನ್ನು ಚೌಧರಿಯವರ ಮತ್ತೊಂದು ವಚನದಿಂದ ಸಮರ್ಥನಮಾಡಬಹುದು. ಆ ವಚನವಾದರೂ ಹೀಗಿದೆ:

> "೧೭೯೯ರಲ್ಲಿ ಮೈಸೂರು ಪ್ರಕಟಿಸಿದ ಧೀರ ಸಂರಕ್ಷಣಾ ಪ್ರಕರಣ; ಟೀಪುಸುಲ್ತಾನನ ವೀರ ಮರಣ—ಇವು ರಾಷ್ಟ್ರೀಯೋದ್ಯಮಕ್ಕೆ ಘನಗಂಭೀರ ಉದಾಹರಣೆಗಳಾದುವು.
>
> ವಿರಾಧಹಸ್ತದಂತೆ ವಿಸ್ತಾರಗೊಳ್ಳುತ್ತಿದ್ದ ಬ್ರಿಟಿಷರ ಪ್ರಭುತ್ವದಿಂದ ಭಯಭ್ರಾಂತರಾಗಿದ್ದ ಇತರ ಮಾನಧನರಿಗೆ. ಇವು ಸ್ಫೂರ್ತಿ ಕಾರಣಗಳಾದುವು."[2]

---

[1] "The strong undercurrent of popular disaffection frequently manifesting itself in open resistance against the ruling authority seems to have been a normal feature of *pax Britannica* in India."—*Civil Disturbances during the British Rule in India: S. B. Chaudhury, p.* 198.

[2] "The brave defence of Mysore and the heroic death of its Sultan in 1799 had set noble examples of national exertion and served as an inspiration to other spirits who were in mortal peril at the encroachment of the British power."—*ibid. p. 203.*

೧೮೫೭-೫೮ಕ್ಕೆ ಪೂರ್ವ ಐವತ್ತು ವರ್ಷಗಳಲ್ಲಿ, ಕರ್ಣಾಟಕದಲ್ಲಿ ಒಂದರ ಹಿಂದೊಂದರಂತೆ ನಾನಾ ಬಂಡಾಯಗಳು ನಡೆದುವು. ಬಿದನೂರು, ಕಿತ್ತೂರು, ಸಂಗೊಳ್ಳಿ, ಶಿಂದಗಿ, ದಕ್ಷಿಣ ಕನ್ನಡ ಮತ್ತು ಕೊಡಗು, ಬಾದಾಮಿಗಳಲ್ಲಾದ ಪ್ರಕರಣಗಳ ವಿಚಾರವಾಗಿ ಮಾತ್ರ ನಮಗೀಗ ಅಲ್ಪಸ್ವಲ್ಪ ವಿಷಯಗಳು ತಿಳಿದು ಬಂದಿವೆ. ಇವೆಲ್ಲ ಬಂಡಾಯಗಳ ಪರಮೋದ್ದಿಶ್ಯ ಭಾರತದಲ್ಲಿ ಪರದೇಶಿ ಪ್ರಭುತ್ವ ಸ್ಥಾಪನೆಯಾಗದಂತೆ ಮಾಡುವುದೇ ಆಗಿದೆ. ಈ ಪ್ರಕರಣಗಳ ವಿವರಗಳನ್ನರಿತಾಗ ೧೮೫೭ಕ್ಕೆ ಹಿಂದೆ ಬ್ರಿಟಿಷ್ ಆಳರಸರನ್ನು ಕುರಿತು ಪ್ರಜೆಗಳ ಮನೋಭಾವ ಹೇಗಿತ್ತೆಂಬುದು ವಿಶದವಾಗುತ್ತದೆ. ವಿಶಾಲಭಾರತದಲ್ಲೂ, ಕರ್ಣಾಟಕದಲ್ಲೂ, ೧೮೫೭ಕ್ಕೆ ಹಿಂದೆ ನಡೆದ ಬ್ರಿಟಿಷ್ ವಿರುದ್ಧ ಬಂಡಾಯಗಳೆಲ್ಲ ೧೮೫೭ರಲ್ಲಾದ ರಾಷ್ಟ್ರೀಯ ಮಹಾಸ್ಫೋಟನಕ್ಕೆ ದಾರಿಮಾಡಿಕೊಟ್ಟವೆಂದು ಹೇಳುವುದರಲ್ಲಿ ಅತಿಶಯವೇನೂ ಇಲ್ಲ.

---

## ೧. ಬಿದನೂರಲ್ಲಿ ಧೋಂಡಿಯ ವಾಘ್, ೧೮೦೦.

ಈ ಪೂರ್ವಸಿದ್ಧತೆಯ ಪ್ರಸಂಗದಲ್ಲಿ, ಕರ್ಣಾಟಕದಲ್ಲಿ ರಣಪರಾಕ್ರಮಿ ಧೋಂಡಿಯಾ ವಾಘನ ಪ್ರಕರಣವೇ ಮೊಟ್ಟಮೊದಲನೆಯದು. ಇವನು ಶಿವಮುಗ್ಗಿ ಜಿಲ್ಲೆಯ ಚೆನ್ನಗಿರಿಯವನು, ಮರಾಠಾ ಪಂಗಡದವ. ೧೭೮೦ ರ ಸುಮಾರಿನಲ್ಲಿ ಇವನು ಹೈದರನ ಸೈನ್ಯಕ್ಕೆ ಸವಾರನಾಗಿ ಸೇರಿದ. ಕಾರ್ನವಾಲೀಸನು ಮೈಸೂರಿನ ಮೇಲೆ ದಂಡೆತ್ತಿ ಬಂದಾಗ ಇವನು ಮೈಸೂರು ಸೈನ್ಯಬಿಟ್ಟು, ಹಲವು ಸೈನಿಕರೊಂದಿಗೂ, ಸೂರೆಯ ಸಂಪತ್ತಿನೊಂದಿಗೂ, ಧಾರವಾಡಕ್ಕೆ ಹೋದ. ೧೭೯೪ರವರೆಗೆ ದರೋಡೆಗಾರನಂತೆ ಜೀವನ ನಡೆಸಿದ. ಮತ್ತೆ ಟೀಪುವಿನಿಂದ ಪ್ರೋತ್ಸಾಹಿತನಾಗಿ, ಇನ್ನೂರು ಸವಾರರೊಂದಿಗೆ ಮೈಸೂರಿಗೆ ಹಿಂತಿರುಗಿದ. ಬಲವಂತವಾಗಿ ಇವನನ್ನು ಇಸ್ಲಾಂ ಮತಕ್ಕೆ ಸೇರಿಸಲಾಯಿತೆಂದು ಹೇಳಲಾಗಿದೆ. ಇದು ಹೇಗಾದರೂ ಇರಲಿ. ಇವನು ಟೀಪುವಿನ ಕೋಪಕ್ಕೊಳಗಾಗಿ ಬಂಧನಕ್ಕೆ ಸಿಕ್ಕಿದ. ಶ್ರೀರಂಗಪಟ್ಟಣದ ಪತನಾನಂತರ ಬಂಧನದಲ್ಲಿದ್ದ ಇವನನ್ನು ಬ್ರಿಟಿಷರು ಬಿಡುಗಡೆಮಾಡಿದರು.

ಅಲ್ಲಿಂದ ಇವನು ಬಿದನೂರಿಗೆ ಬಂದ ; ಕೆಲವು ಸವಾರರನ್ನು ಸೇರಿಸಿಕೊಂಡು ಒಂದು ದಳ ಕಟ್ಟಿದ. ಬ್ರಿಟಿಷರು ಟೀಪುವಿನ ಸೈನ್ಯವನ್ನು ಒಡೆದು, ಉದ್ಯೋಗಿಗಳನ್ನೆಲ್ಲ ಚದರಿಸಿದರಷ್ಟೆ. ಈ ಸೈನಿಕರನೇಕರನ್ನು ಧೋಂಡಿಯಾ ತನ್ನ ವಶಮಾಡಿಕೊಂಡು ಸೈನ್ಯ ಕಟ್ಟಿದ. ರಾಜ್ಯವೊಂದನ್ನು ನಿರ್ಮಿಸಲಾರಂಭಿಸಿದ. ಶಿವಮುಗ್ಗಿಯ ಪ್ರಾಂತ್ಯವನ್ನೂ, ಬಿದನೂರು ರಾಜ್ಯದ ಹಲವು ಭಾಗಗಳನ್ನೂ, ತನ್ನದನ್ನಾಗಿಮಾಡಿಕೊಂಡ. ಸಣ್ಣ ರಾಜ್ಯವೊಂದಾಯಿತು. ಧೋಂಡಿಯಾನ ಸಾಹಸೋದ್ಯಮಗಳ ಕಡೆ ಬ್ರಿಟಿಷರ ಕಣ್ಣು ಬಿತ್ತು. ಹೀಗೆಯೇ ಇವನನ್ನು ಬಿಟ್ಟರೆ ತಮ್ಮಪಾಲಿಗೆ ಈ ಶೂರ ಶೂಲವೆನಿಸುವುದು ಖಂಡಿತವೆಂದು ಖಚಿತ ಮಾಡಿಕೊಂಡರು. ಅವನನ್ನು ಮಟ್ಟ ಹಾಕಲು ಬ್ರಿಟಿಷ್ ಸೈನ್ಯಗಳು ಹೊರಟವು. ಹಾಸನದ ಕಡೆ ಪಡೆಯೊಂದು ಹೋಯಿತು. ಚಿತ್ರದುರ್ಗದ ಕಡೆ ಕರ್ನಲ್ ಡಾಲ್ರಿಂಪಲ್, ಧೋಂಡಿಯಾ ವಾಘನನ್ನೆದುರಿಸಿ, ಅನೇಕ ಸೈನಿಕರನ್ನು ಕೊಂದು, ಶಿವಮುಗ್ಗಿಯ ಕಡೆ ಹೊರಟ. ತನ್ನ ಕಡೆಯ ೪೦ ಮಂದಿಯನ್ನು ಸೆರೆಹಿಡಿದು ಅವರಲ್ಲಿ ೩೯ ಮಂದಿಯನ್ನು ಡಾಲ್ರಿಂಪಲ್ ಗಲ್ಲಿಗೇರಿಸಿದನೆಂಬ ಸುದ್ದಿಯನ್ನು ಬಿಡುಗಡೆಯಾದವನೊಬ್ಬನಿಂದ ಕೇಳಿ, ಆಕ್ರೋಶದಿಂದ, ಧೋಂಡಿಯಾ ಸೈನ್ಯವನ್ನು ಮತ್ತಷ್ಟು ಬಲಪಡಿಸಿಕೊಂಡ. ಹೈದರಾಬಾದ್, ಕಡಪಗಳಿಂದಲೂ ಚದರಿದ ಸೈನಿಕರನೇಕರು ಧೋಂಡಿಯಾ ಸೈನ್ಯಕ್ಕೆ ಸೇರಿದರು.

> "ಈಗ ಧೋಂಡಿಯಾ ಕೇವಲ ದಂಗೆ ಕೋರನಾಗಿ, ಲೂಟಿ ಲಬಾಡುಗಳಲ್ಲಾಸಕ್ತನಾಗಲಿಲ್ಲ. ಕಂಪೆನಿಯ ಪ್ರಭುತ್ವವಲಯಗಳಲ್ಲಿದ್ದ, ಅತೃಪ್ತಿ ಅಸಮಾಧಾನಗಳಿಂದ ಕೂಡಿದ್ದ ಪ್ರಭುಗಳಿಗೆಲ್ಲ ತನ್ನ ಹೆಸರಿನಲ್ಲಿ ಪತ್ರಗಳನ್ನು ಬರೆದು ಕಳುಹಿಸಿದ. ಎಲ್ಲರೂ

ಒಂದಾಗಿ ಮೈಸೂರಿನ ಬ್ರಿಟಿಷ್ ರಾಜ್ಯದ ಮೇಲೆ ಬೀಳಬೇಕೆಂದು ಅವರಿಗೆಲ್ಲ ಸೂಚನೆಮಾಡಿದ. ಇದರಿಂದ ಇವನ ರಾಜಕೀಯ ಸ್ಥಾನ ಬಲ ಹೆಚ್ಚಿತು. ರಾಜಕೀಯ ಹಿತೈಕ ದೃಷ್ಟಿಯಿಂದ ಇತರರನ್ನೂ ಸೇರಿದನಾಗಿ ಧೋಂಡಿಯಾ ಗಣನಾರ್ಹನಾದ 'ರಾಜಕೀಯ ಒಕ್ಕೂಟದ ನಾಯಕನಾದ'. ಇಂತಹ ಪ್ರಬಲನನ್ನು ತನ್ನಿಚ್ಛೆ ಬಂದಂತೆ ವರ್ತಿಸಲು ಬಿಟ್ಟರೆ ಬ್ರಿಟಿಷ್ ಆಡಳಿತಕ್ಕೆ ವಿಪತ್ತಲ್ಲವೆ? ಬ್ರಿಟಿಷ್ ದಂಡನಾಯಕ ಕರ್ನಲ್ ವೆಲ್ಲೆಸ್ಲಿಯೇ ಸ್ವತಃ ಸೈನ್ಯ ಸಮೇತನಾಗಿ ಹೊರಟು, ರಣರಂಗ ಪ್ರವೇಶಮಾಡಿ, ಧೋಂಡಿಯಾನನ್ನೆದುರಿಸ ಬೇಕಾಗಿ ಬಂದ ಪ್ರಸಂಗವನ್ನು ನೋಡಿದಾಗ, ಬ್ರಿಟಿಷ್ ಪ್ರಭುತ್ವಕ್ಕೆ ಧೋಂಡಿಯಾ ಬಂಡಾಯದಿಂದ ಒದಗಿದ ವಿಪತ್ತಿನ ಸ್ವರೂಪವು ಸೂಚಿತವಾಗಬಹುದು."[3]

ಮರಾಠರಿಗೆ ಸೇರಿದ ಕೃಷ್ಣಾ-ತುಂಗಭದ್ರಾ ಕ್ಷೇತ್ರವನ್ನು ತನ್ನ ಸಮರ ಸನ್ನಾಹ ಭೂಮಿಯನ್ನಾಗಿ ಮಾಡಿಕೊಂಡು ಧೋಂಡಿಯಾ ಬ್ರಿಟಿಷರನ್ನೆದುರಿಸಿ ಹೊಡೆ ದಾಡುತ್ತಿದ್ದ. ಆಗ ಬ್ರಿಟಿಷರು ಪುಣೆಯ ದರಬಾರಿನೊಂದಿಗೆ ಮಾತುಕತೆ ನಡೆಸಿದರು. ಧೋಂಡಿಯಾನನ್ನು ಹಿಂದಟ್ಟಿಕೊಂಡು ಮರಾಠರಿಗೆ ಸೇರಿದ ಕ್ಷೇತ್ರಗಳನ್ನೂ ಪ್ರವೇಶಮಾಡಲು ದೀರ್ಘಕಾಲದ ಕೊಸರಾಟಾನಂತರ ಬ್ರಿಟಿಷ ಸೈನಿಕರಿಗೆ ಅಪ್ಪಣೆ ಸಿಕ್ಕಿತು.

ಕರ್ನಲ್ ಆರ್ಥರ್ ವೆಲ್ಲೆಸ್ಲಿಯ ಕೆಲಸ ಸುಗಮವಾಯಿತು. ಧೋಂಡೋಜಿ ಯನ್ನು ಹಿಂದಟ್ಟಿ ಹೊರಟ. ಈ ಕಾರ್ಯಸಾಧನೆಯಲ್ಲಿ ಮರಾಠರೂ ನಿಜಾಮನೂ ಬ್ರಿಟಿಷರಿಗೆ ಪೂರ್ಣ ನೆರವಾದರು. ಬಲಯುತರಾದ ಈ ಮೂವರನ್ನೂ ಎದುರಿಸುವುದು ಧೋಂಡೋಜಿಗೆ ಅಸಾಧ್ಯವೆನಿಸಿತು. ನೇರವಾಗಿ ಶತ್ರುಗಳನ್ನೆದು ರಿಸುವುದು ಬಿಟ್ಟ. ಶತ್ರುಗಳ ಕೈಗೆ ಸಿಗದಿರಲು ಘೋರಾರಣ್ಯ ಸೇರಿದ. ಸ್ಥಳ ದಿಂದ ಸ್ಥಳಕ್ಕೆ ಓಡಿ, ತಲೆಮರೆಸಿಕೊಂಡ. ಹಾಗೂ ಸೈನ್ಯ ಬಲ ಹೆಚ್ಚಿಸಿ ಕೊಳ್ಳುತ್ತಿದ್ದ.

ಒಮ್ಮೆ ಧೋಂಡಿಯಾ ಸೈನ್ಯ ಸಮೇತನಾಗಿ ಮಲಪ್ರಭಾ ನದಿಯ ಬಲದಡ

---

[3] "This time, he was behaving not merely as a bandit chief; but he seems to have considerably elevated his position by his political affiliation with many disaffected chiefs of Company's territories whom he invited by letters written in his name, to make a joint attack on the British territory of Mysore. By allying himself with political interests, he for the time being, became a power to be reckoned with, 'the head of a political confederacy' who could not be allowed in the interest of the Government, to carry on his activities with impunity. The fact that the famous British General Colonel Wellesley had to take the field against him may indicate the nature of the danger that confronted the British rule, by reason of the revolt of the ambitious chief.' —*Ibid.* p.119.

ದಲ್ಲಿ ಬೀಡುಮಾಡಿದ್ದ. ಈ ಸಮಾಚಾರ ಇವನನ್ನೇ ಹುಡುಕುತ್ತಿದ್ದ ವೆಲ್ಲೆಸ್ಲಿಗೆ ಗೊತ್ತಾಯಿತು. ತಕ್ಷಣ ಸೈನ್ಯದೊಂದಿಗೆ ಬಂದು ಧೋಂಡಿಯಾ ಮೇಲೆ ಬಿದ್ದ. ಘೋರ ಕದನವಾಗಿ, ಧೋಂಡಿಯಾ ವಿಧಿಯಿಲ್ಲದೆ, ತನ್ನ ಆನೆ, ಕುದುರೆ, ಒಂಟೆ ಗಳು, ಎತ್ತುಗಳೇ ಮೊದಲಾದ ಸಮಸ್ತ ವಸ್ತುಗಳನ್ನು ಶತ್ರುಗಳಿಗೆ ಬಿಟ್ಟು, ತಪ್ಪಿಸಿಕೊಂಡು ಹೋದ. ನದಿಯ ಎಡದಡ ಸೇರಿದ. ಶತ್ರುಗಳು ಅವನನ್ನು ಅಲ್ಲೂ ಎದುರಿಸಲು ಮಹಾ ಪ್ರಯತ್ನಮಾಡಿದರು. ಧೋಂಡಿಯಾ ಮತ್ತು ಅವನ ಕಡೆಯವರಾಕ್ರಮಿಸಿದ್ದ ಶಿರಹಟ್ಟಿ ಕೋಟೆಯನ್ನು ವಶಪಡಿಸಿಕೊಳ್ಳುವುದು ಬ್ರಿಟಿಷರಿಗೆ ಅಸಾಧ್ಯವಾಯಿತು. ಕಡೆಗೆ ಸರ್ ಜಾರ್ಜ್ ಸಿಂಕ್ಲೇರನು ಫಿರಂಗಿ ಪಡೆ ಯಿಂದಕೂಡಿ, ಕೋಟೆಯನ್ನು ಮುತ್ತಿ, ಅದನ್ನು ವಶಪಡಿಸಿಕೊಂಡ.

ಇಲ್ಲಿಂದ ಧೋಂಡಿಯಾ ಹೈದರಾಬಾದ್ ಕ್ಷೇತ್ರದ ಕಡೆ ಓಡಿದ. ವೆಲ್ಲೆಸ್ಲಿಯು ಅಲ್ಲೂ ಅವನನ್ನು ಹಿಂಬಾಲಿಸಿ, ಚತುರತೆಯಿಂದ ಸೈನ್ಯ ವ್ಯವಸ್ಥೆಮಾಡಿ ಧೋಂಡಿಯನ ಮೇಲೆ ಬಿದ್ದ. ೧೮೦೦ ನೆಯ ಸೆಪ್ಟೆಂಬರ್ ೧೦ರಂದು ಕೊನಗಾಲದ ಬಳಿ ಘೋರ ಕದನವಾಯಿತು. ಧೋಂಡಿಯಾ ಸೈನ್ಯದಲ್ಲಾಗ ೫,೦೦೦ ಅಶ್ವಾರೂಢರಿದ್ದರು. ವೆಲ್ಲೆಸ್ಲಿಯು ಇದ್ದಕ್ಕಿದ್ದಹಾಗೆ ಧೋಂಡಿಯಾ ಮೇಲೆ ಬಿದ್ದನಾದರೂ ಅವನು ದೃಢ ಚಿತ್ತನಾಗಿ, ವೀರಾವೇಶದಿಂದ ಬ್ರಿಟಿಷ ಸೈನಿಕರೊಂದಿಗೆ ಹೋರಾಡಿದ. ಆದರೆ ಸಮಯ ಅವನಿಗೆ ವಿರುದ್ಧವಾಯಿತು; ಸೋತ; ಕಡೆಯವರೆಗೂ ಶತ್ರುಗಳೊಂದಿಗೆ ಪರಾಕ್ರಮದಿಂದ ಹೋರಾಡಿ, ರಣರಂಗದಲ್ಲಿ ಬಿದ್ದ. ಇಂದಿಗೂ ಶಿವಮಗ್ಗಿ ಜಿಲ್ಲೆಯ ಶಿಕಾರಿಪುರದ ಹುಚ್ಚರಾಯಸ್ವಾಮಿ ದೇವಾಲಯದಲ್ಲಿ ಎರಡಲಗಿನ ಕತ್ತಿ ಯೊಂದನ್ನು ಕಾಪಾಡಿ ಇಟ್ಟಿದ್ದಾರೆ. ದೇವಾಲಯಕ್ಕೆ ಹೋದವರಿಗೆಲ್ಲ ಅಲ್ಲಿನವರು "ಇದು ಧೋಂಡಿಯಾ ವಾಘನ ಕರವಾಲ" ವೆಂದು ಹೇಳಿ, ತೋರಿಸುತ್ತಾರೆ. ಇದನ್ನು ನೋಡಿದವರು ಯಾರೇ ಆಗಲಿ "ಈ ಕತ್ತಿ ಹಿಡಿದವನೆಂತಹ ಮಹಾವೀರ ನಾಗಿರಬೇಕು" ಎಂದು ಭಾವಿಸಿ, ಆಶ್ಚರ್ಯಪಡದೆ ಇರರು.

> "ಧೋಂಡಿಯಾ ಸಾಮಾನ್ಯನಲ್ಲ; ಅಪೂರ್ವ ಬಲಯುತನಾದ ನಾಯಕ. ತನ್ನದೇ ಆದ ರೀತಿಯಲ್ಲಿ ಅವನು ಬ್ರಿಟಿಷ್ ಪ್ರಭುತ್ವ ವನ್ನೆದುರಿಸುವುದರಲ್ಲಿ ಸರ್ವಶಕ್ತಿಗಳನ್ನೂ ಉಪಯೋಗಿಸಿದ. "ಉಭಯ ಲೋಕಾಧೀಶ್ವರ"ನೆಂದು ಅವನು ಹೊತ್ತ ಬಿರುದಿ ನಿಂದಲೇ ಅವನ ರಾಜಕೀಯ ಆಶಯಗಳೇನಾಗಿದ್ದಿರಬಹುದೆಂದು ಅನುಮಾನ ಮಾಡಬಹುದು. ತನ್ನ ರಾಜ್ಯದಲ್ಲಿ ಅನೇಕ ಅಧಿಕಾರಿ ಗಳನ್ನು 'ನವಾಬ'ಗಿರಿಗೇರಿಸಿದ್ದರಿಂದಲೇ ಊಹಿಸಬಹುದು. ಸಕಾಲ ದಲ್ಲಿ ಇವನನ್ನು ಎದುರಿಸಿ, ಇವನ ಮುನ್ನಡೆಯನ್ನು ತಡೆಯದೇ ಇದ್ದಿದ್ದರೆ ಇವನು ಎರಡನೆಯ ಹೈದರನಾಗುತ್ತಿದ್ದನೆಂದು ಥಾರ್ನಟನ್ ಅಭಿಪ್ರಾಯಪಡುತ್ತಾನೆ. ಸರ್ ಥಾಮಸ್ ಮನ್ರೋ ಸಹ ಇದೇ ಅಭಿಪ್ರಾಯವುಳ್ಳವನಾಗಿದ್ದನೆಂದು ಅವನ ಮಾತನ್ನೇ ಎತ್ತಿಕೊಡು ತ್ತಾನೆ. ವಿಪರ್ಯಯ ಕ್ಷೇತ್ರದಲ್ಲಿ ಇವನು ಹೈದರನಾಗಿದ್ದರೂ ಇವನ ಅಲ್ಪಕಾಲದ ಜೀವನ ಕ್ಷಾತ್ರುವು ಕ್ರಮ ಪ್ರಾಪ್ತವಾಗಿ ವಿಸ್ತಾರಗೊಳ್ಳು

ತ್ತಿದ್ದ ಬ್ರಿಟಿಷ್ ಪ್ರಭುತ್ವ ವಿರೋಧ ವರ್ಗದ ಮೇಲೆ, ಆಶಾಪೂರಿತ ಪ್ರಕೃತಿಗಳ ಮೇಲೆ, ಎಂತಹ ಪ್ರತಿಕ್ರಿಯೆಯನ್ನು ಉಂಟುಮಾಡಿತೆಂಬುದನ್ನು ತೋರಿಸುತ್ತದೆ.''[4]

---

[4] "Dhundia was a leader of considerable ability and he resisted British rule with all his might in his own way. He had considerable political ambitions as we can presume from his assumption of the title of 'King of the two worlds' and from his appointment of officers to the rank of Nawab in his territories. Thornton thinks that he might have been a second Hyder Ali, had his progress not received a timely check, and quotes Sir Thomas Munro who held the same view. Though Dhundia was Hyder Ali in the wrong place, his short career forms a striking episode of the reaction of the ambitious elements of the country to the gradual expansion of the British rule. "—*Ibid p. 129*.

## ೨. ಐಗೂರು ವೆಂಕಟಾದ್ರಿನಾಯಕ, ೧೮೦೨

ಧೋಂಡಿಯಾ ವಾಘನ ಅನಂತರ ಐಗೂರು ಪಾಳೆಯಗಾರ ವೆಂಕಟಾದ್ರಿ ನಾಯಕನನ್ನು ಬ್ರಿಟಿಷರು ಎದುರಿಸಬೇಕಾಯಿತು. ಶ್ರೀರಂಗಪಟ್ಟಣದ ಪತನವಾದಮೇಲೆ ಕೃಷ್ಣಪ್ಪನಾಯಕನ ಮಗ ವೆಂಕಟಾದ್ರಿನಾಯಕ ಮೈಸೂರಿನ ಬ್ರಿಟಿಷ್ ಪ್ರಭುತ್ವವನ್ನು ಪ್ರತಿಭಟಿಸಿ ನಿಂತ. ಮಂಜರಾಬಾದಿನ ಬಳಿ ಅರಣ್ಯ ಮಧ್ಯದ ಅರಕೆರೆ ಕೋಟೆಯನ್ನು ಭದ್ರಪಡಿಸಿ, ಅಲ್ಲಿ ನಿಂತ. ೧೮೦೦ ರಲ್ಲಿ ಲೆಫ್ಟಿನೆಂಟ್ ಕರ್ನಲ್ ಮಾಂಟ್ರಿಗ್ಯೂರನು ದಂಡೆತ್ತಿಬಂದು, ಅರಕೆರೆ ಕೋಟೆಯನ್ನು ಮುತ್ತಿ ಅದನ್ನು ನಾಶಗೊಳಿಸಿದ. ಆದರೂ ವೆಂಕಟಾದ್ರಿ ನಾಯಕ ಅದನ್ನು ಮತ್ತೆ ವಶಪಡಿಸಿಕೊಂಡ. ಧೋಂಡಿಯಾ ವಾಘನ ಅನಂತರ ವೆಂಕಟಾದ್ರಿ ನಾಯಕನನ್ನು ಹಿಡಿಯಲು ವೆಲ್ಲೆಸ್ಲಿ ಸಂಕಲ್ಪಮಾಡಿದ. ನಾಯಕನನ್ನು ಹುಡುಕುತ್ತ ಅವನ ಸೈನ್ಯಗಳನ್ನು ಅಟ್ಟಿಕೊಂಡು ಬಂದ. ನಾಯಕನ ಪ್ರಮುಖರೆಲ್ಲ ಶತ್ರುಗಳ ವಶವಾದರು. ಹಲವು ಹಿಂಬಾಲಕರೊಂದಿಗೆ ನಾಯಕ ಅರಣ್ಯಗರ್ಭ ಸೇರಿದ. ೧೮೦೨ನೆಯ ಫೆಬ್ರುವರಿ ತಿಂಗಳಲ್ಲಿ ಒಂದು ದಿನ ವೆಂಕಟಾದ್ರಿನಾಯಕ ಹಳ್ಳಿಯೊಂದರಿಂದ ತನಗೆ ಬೇಕಾದ್ದನ್ನು ತರಿಸಲು ತನ್ನವರನ್ನು ಕಳುಹಿಸಿದ. ಈ ಸುಳುವನ್ನು ತಿಳಿದು ಶತ್ರುಗಳು ಸನ್ನದ್ಧರಾದರು. ನಾಯಕನನ್ನೂ, ಅವನ ಜನರನ್ನೂ ಹಿಡಿದರು. ೧೦-೨-೧೮೦೨ ರಂದು ವೆಂಕಟಾದ್ರಿ ನಾಯಕನನ್ನು ಕೊಂದರು.

---

## ೩. ಶಿಂದಗಿಯ ಕ್ರಾಂತಿಕಾರರು, ೧೮೨೪

೧೮೫೭ಕ್ಕೆ ಪೂರ್ವದಲ್ಲಿ ಕರ್ನಾಟಕ ಪ್ರದೇಶದಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಅನೇಕ ಬಂಡಾಯಗಳಾದುವು. ಅವುಗಳಲ್ಲಿ ಶಿಂದಗಿ ಬಂಡಾಯ ಪ್ರಸಿದ್ಧವಾಗಿದೆ.

ದಿವಾಕರ ದೀಕ್ಷಿತ, ರಾವ್‌ಜಿ ರಾಸ್ತಿಯ ಮತ್ತು ಬಾಳಪ್ಪ ದೇಶಪಾಂಡೆ ಮೊದಲಾದವರು ತುಕ್ಕಳಿಯ ಶೆಟ್ಟೆಯಪ್ಪ ಎಂಬುವನೊಡನೆ ಸೇರಿ ೧೮೨೪ ರಲ್ಲಿ ಪರಕೀಯ ಪ್ರಭುತ್ವದ ವಿರುದ್ಧ ಒಂದು ಬಂಡಾಯವನ್ನೆಬ್ಬಿಸಿದರು. ಬಿಜಾಪುರಕ್ಕೆ ೪೦ ಮೈಲಿ ದೂರದಲ್ಲಿರುವ ಶಿಂದಗಿ ಎಂಬ ಸ್ಥಳವನ್ನು ಕ್ರಾಂತಿಕಾರರು ತಮ್ಮ ವಶಪಡಿಸಿಕೊಂಡರು. ಆ ನಗರದ ಪಟೇಲ ಮತ್ತು ಕುಲಕರ್ಣಿ ಸಹ ಕ್ರಾಂತಿಕಾರರೊಡನೆ ಸೇರಿಕೊಂಡರು.

ದಿವಾಕರ ದೀಕ್ಷಿತನ ತಂದೆ ಚಿದಂಬರ ದೀಕ್ಷಿತರೇ ಈ ಕ್ರಾಂತಿಯ ಪ್ರಧಾನ ಚಾಲಕರು. "ಈಸ್ಟ್ ಇಂಡಿಯಾ ಕಂಪೆನಿ ಅಳಿದುಹೋಯಿತು. ನಾವು ಅದಕ್ಕೆ ಮನ್ನಣೆ ಕೊಡಬೇಕಾಗಿಲ್ಲ. ನಾವು ಈಗ ಸರ್ವತಂತ್ರ ಸ್ವತಂತ್ರರು" ಎಂಬದಾಗಿ ಘೋಷಿಸಿ, ಕ್ರಾಂತಿಕಾರರು ಜನತೆಯನ್ನು ಹುರಿದುಂಬಿಸಿದರು. ಅಮೃತರಾವ್ ವಿನಾಯಕರಾವ್, ಮಾಧವರಾಯರ ಧ್ವಜವನ್ನೇರಿಸಿದರು; ಮತ್ತು ಕಂದಾಯವನ್ನು ವಸೂಲಿಮಾಡಲು ಆರಂಭಿಸಿದರು. ಆದರೆ ಕ್ರಾಂತಿ ಯಶಸ್ವಿಯಾಗಲಿಲ್ಲ. ದೇಶದ್ರೋಹಿಗಳ ಚಟುವಟಿಕೆಯಿಂದ ಶಿಂದಗಿ ಬಂಡಾಯವು ವಿಫಲವಾಯಿತು. ಅಣ್ಣಪ್ಪ ಪಟಕಿ ಮೊದಲಾದ ದೇಶದ್ರೋಹಿಗಳು ಬ್ರಿಟಿಷರೊಂದಿಗೆ ಸೇರಿ, ಕ್ರಾಂತಿಕಾರರ ವಿರುದ್ಧ ಚಟುವಟಿಕೆಗಳಲ್ಲಿ ತೊಡಗಿದ್ದರು. ಅಣ್ಣಪ್ಪ ಪಟಕಿ ಈ ಹೀನ ಕೃತ್ಯದಲ್ಲಿ ತೊಡಗಿದ್ದಾಗಲೇ ಕ್ರಾಂತಿಕಾರರ ಕೈಗೆ ಸಿಕ್ಕಿ ಮಡಿದ.

ಶಿಂದಗಿ ಬಂಡಾಯದ ಸುದ್ದಿ ಧಾರವಾಡ ಕಲೆಕ್ಟರ್ ಸ್ಟೀವರ್ಸನಿಗೆ ಮುಟ್ಟಿತು. ಅವನು ಒಂದು ಹೇಳಿಕೆಯನ್ನು ಹೊರಡಿಸಿ, ಬಂಡುಗಾರ ಮುಖಂಡರನ್ನು ಹಿಡಿದು ಕೊಟ್ಟವರಿಗೆ ಬಹುಮಾನ (ದಿವಾಕರ ದೀಕ್ಷಿತ—೧,೦೦೦ ರೂ., ರಾವ್‌ಜಿ ರಾಸ್ತಿಯ—೫೦೦ ರೂ., ಬಾಳಪ್ಪ ದೇಶಪಾಂಡೆ—೫೦೦ ರೂ., ಆಲೂಪ ಪಿಂಡಾರಿ—೨೦೦ ರೂ., ಶೆಟ್ಟೆಯಪ್ಪ—೧೦೦ ರೂ., ಶೀನಪ್ಪ—೧೦೦ ರೂ.) ಹಂಚುವುದಾಗಿಯೂ, ಬಂಡುಗಾರರಿಗೆ ರಕ್ಷಣೆ ಕೊಟ್ಟ ಜನಕ್ಕೆ ತಕ್ಕ ಶಿಕ್ಷೆ ಮಾಡುವುದಾಗಿಯೂ ಎಚ್ಚರಿಸಿದ. ಅನಂತರ ಬ್ರಿಟಿಷ್ ಸೈನ್ಯ ಶಿಂದಗಿಯನ್ನು ತನ್ನ ವಶಪಡಿಸಿಕೊಂಡಿತು. ಬಂಡಾಯದ ಮುಖಂಡರು ಸೆರೆಹಿಡಿಯಲ್ಪಟ್ಟರು. ೧೮೨೪ರಲ್ಲಿ ನಡೆದ ಈ ಬಂಡಾಯವು ಯಶಸ್ವಿಯಾಗದಿದ್ದರೂ ಕರ್ನಾಟಕ ಪ್ರಾಂತ್ಯದ ಜನತೆಯಲ್ಲಿ ಒಂದು ನವಚೈತನ್ಯವನ್ನು ಮೂಡಿಸಿತು. ಬ್ರಿಟಿಷರ ವಿರುದ್ಧ ಜನತೆಯನ್ನು ಒಂದುಗೂಡಿಸಲು ಸಹಾಯಮಾಡಿತು.

---

## ೪. ಕನ್ನಡನಾಡಿನ ರಾಣಿ ಕಿತ್ತೂರು ಚೆನ್ನಮ್ಮ, ೧೮೨೪

[5]"ಕಿತ್ತೂರು" ಅಂದ ಕೂಡಲೆ ವೀರಮಾತೆ ಚೆನ್ನಮ್ಮಾಜಿಯ ಧೀರ, ಗಂಭೀರ, ಸುಂದರ ಚಿತ್ರ ನಮ್ಮ ಸ್ಮೃತಿ ಪಟಲದ ಮುಂದೆ ಹಾದು ಹೋಗುತ್ತದೆ. ಕಿತ್ತೂರು, ಚೆನ್ನಮ್ಮನಿಂದ ಪವಿತ್ರವೆನಿಸಿದೆ. 'ಚೆನ್ನಮ್ಮನ ಕಿತ್ತೂರು' ಎಂದೇ ಇಂದಿಗೂ ಅದರ ಹೆಸರು ಇತಿಹಾಸ ಪ್ರಸಿದ್ಧವಾಗಿದೆ. ಚೆನ್ನಮ್ಮನ ಪರಾಕ್ರಮೇತಿಹಾಸ, ಸ್ವಾತಂತ್ರ್ಯ ಪ್ರೇಮದ ಇತಿಹಾಸ, ಪರಿಚಯವಿಲ್ಲದ ಕನ್ನಡಿಗರೇ ಇಲ್ಲ.

ಈಗ ಕಿತ್ತೂರು ಬೆಳಗಾವಿ ಜಿಲ್ಲೆಯ ಒಂದು ಸಣ್ಣಹಳ್ಳಿ. ಇನ್ನೂರು ಮುನ್ನೂರು ವರ್ಷಗಳ ಹಿಂದೆ ಅದು ಮಹಾವೈಭವದ ಬೀಡಾಗಿ, ವೀರ ಕನ್ನಡ ದೇಸಾಯಿಗಳ ಗೊತ್ತಾಗಿ, ಕರ್ಣಾಟಕದಲ್ಲೊಂದು ಪ್ರಭಾವಶಾಲಿ ಸಂಸ್ಥಾನವೆನಿಸಿತ್ತು. ನಂದಗಡ, ಖಾನಾಪುರ, ಬೈಲಹೊಂಗಲ, ಕಿತ್ತೂರು, ಸಂಪಗಾವಿ, ದೇಸನೂರು ಮುಂತಾದುವು ಆ ಸಂಸ್ಥಾನದ ಮಹಾವಾಣಿಜ್ಯ ನಗರಿಗಳು! ಸುಪ್ರಸಿದ್ಧ ನಂದಗಡಕ್ಕೆ ಕೊಂಕಣ ಪ್ರಾಂತ್ಯದ ಸಕಲ ಸಾಮುಗ್ರಿಗಳೂ ಮೊದಲು ಬಂದು, ಅಲ್ಲಿಂದ ಮುಂದೆ ಇತರ ಕಡೆಗಳಿಗೆ ಹೋಗಬೇಕು. ಬೈಲಹೊಂಗಲ ಬಟ್ಟೆ ಕೈಗಾರಿಕೆಗೆ ಪ್ರಸಿದ್ಧ. ಹೆಚ್ಚೇನು, ಕಿತ್ತೂರು ಸಂಸ್ಥಾನ ವ್ಯಾಪಾರಕ್ಕೂ, ವ್ಯವಸಾಯಕ್ಕೂ ಮೂಲಸ್ಥಾನವೆನಿಸಿತ್ತು. ಅದರ ಜೀವನವು ಸರ್ವತೋಮುಖವಾಗಿ ಬೆಳೆದು, ಸಂಪದ್ಯುಕ್ತವಾಗಿತ್ತು. ಆಡಳಿತ ವ್ಯವಸ್ಥೆಯಾದರೂ ಮೆಚ್ಚತಕ್ಕದ್ದಾಗಿತ್ತು.

ಮಲ್ಲಸರ್ಜ ದೇಸಾಯಿ ಕಿತ್ತೂರು ಸಂಸ್ಥಾನದ ಒಡೆಯನಾಗಿ ೧೭೮೭ರಲ್ಲಿ ಪಟ್ಟಕ್ಕೆ ಬಂದ. ಹನ್ನೊಂದನೆಯ ದೇಶಾಯಿಯಾಗಿ, ೩೪ ವರ್ಷಗಳ ಕಾಲ ಆಳಿದ, ಬಾಳಿದ. ಧರ್ಮಕಿಂಕರನೆಂದೂ, ವಿದ್ವಜ್ಜನ ಪೋಷಕನೆಂದೂ, ಹೆಸರುವಾಸಿಯಾದ. ಮೇಲಿಂದಮೇಲೆ ಮಲ್ಲಸರ್ಜನಿಗೆ ತೊಂದರೆಗಳು ಬಂದವು. ಕಿತ್ತೂರು ಪ್ರಾಂತ್ಯವನ್ನು ಟೀಪು ಗೆದ್ದು, ಮಲ್ಲಸರ್ಜನನ್ನು ಸೆರೆಯಲ್ಲಿಟ್ಟಂತೆ ತಿಳಿದು ಬರುತ್ತದೆ. ಆದರೂ ತನ್ನ ಶೌರ್ಯ, ವ್ಯವಹಾರ ಚಾತುರ್ಯಗಳಿಂದ ಬಂದ ಕಷ್ಟಗಳನ್ನೆಲ್ಲಾ ನಿವಾರಿಸಿಕೊಂಡು, ಪೇಷ್ವೆಗಳ ನೆರವಿನಿಂದ ತನ್ನ ದೇಸಗತಿಯನ್ನು ಭದ್ರಪಡಿಸಿದ. ಈತನಿಗೆ ರುದ್ರವ್ವ ಹಿರಿಯ ಪತ್ನಿ, ಚೆನ್ನಮ್ಮಾಜಿ ಕಿರಿಯ ಪತ್ನಿ.

ಚೆನ್ನಮ್ಮ ಕಾಗತಿ ದೇಶಾಯಿಗಳ ಮಗಳು. ರೂಪವತಿ ಮಾತ್ರವಲ್ಲ, ಕ್ಷಾತ್ರತೇಜಸ್ಸಿನಿಂದ ಕೂಡಿದವಳು; ಮೇಲಾಗಿ ರಾಜ್ಯತಂತ್ರ ವಿಶಾರದೆ.

---

[5] The account is based on the information supplied by the Bombay State Committee for the History of Freedom Movement in India and 'Kitturu Bandaya' published by the 'Kithura Channamma Rani Itihasa Mandal', Bailahongal.

" ಕಾಗತಿ ದೇಶಾಯಿಗಳ ಮಗಳೀಕೆ. ಸಣ್ಣ ವಯಸ್ಸಿನಿಂದಲೂ ಈಕೆ ರಾಜನೀತಿ, ಜ್ಞಾನನೈಪುಣ್ಯತೆ ಪಡೆದಿದ್ದಳು. ಕತ್ತಿವರಸೆ ಯಾಟವೆಂದರೆ ಆಕೆಗೆ ಪ್ರಾಣ. ಬಿಲ್ಲು ಬಾಣ, ಕುದುರೆ ಸವಾರಿ ಗಳಲ್ಲಿ ವಿಶೇಷ ಪರಿಶ್ರಮ. ವಿವಾಹಾನಂತರ ಪತಿ ಮಲ್ಲಸರ್ಜ ನೊಂದಿಗೆ ಇದ್ದು ಸಂಗ್ರಾಮ ಕಲಾಕೋವಿದಳೆನಿಸಿದಳು. ಚೆನ್ನಮ್ಮ ರಾಣಿ ಮೇಧಾವಿ, ವಿವೇಕಿ, ಧೈರ್ಯಶಾಲಿ. ತನ್ನ ಪ್ರಜೆಗಳ ಯೋಗಕ್ಷೇಮಸಾಧನೆಗಾಗಿ ಆಕೆ ಮುಟ್ಟದ ಮಟ್ಟವಿಲ್ಲ. ಈ ಕಾರ್ಯಾವಸರದಲ್ಲಿ ಈ ಜಾತಿ, ಆ ಜಾತಿಯೆಂಬ ಭೇದಭಾವವಿಲ್ಲ. ಮಕ್ಕಳನ್ನು ಕಂಡರಂತೂ ಚೆನ್ನಮ್ಮನ ದಯೆಗೆ ಪಾರವೇ ಇಲ್ಲ. ಕಿತ್ತೂರಿನ ಸಮರ-ವೈರ ಕಾಲದಲ್ಲಿ ಹನ್ನೆರಡು ಮಂದಿ ಬ್ರಿಟಿಷ್ ಮಕ್ಕಳನ್ನು ಬಂಧಿಸಿ ಆಕೆಯವರು ತಂದು ನಿಲ್ಲಿಸಿದರು. ಆಗ ಚೆನ್ನಮ್ಮ ಆ ಮಕ್ಕಳನ್ನು ಬ್ರಿಟಿಷರ ಕಡೆಗೇ ಕೊಟ್ಟು ಕಳುಹಿಸಿದಳು. ಅನಾಥರೂ, ಅಂಗವಿಕಲರಂದರಂತೂ ಚೆನ್ನಮ್ಮನ ಹೃದಯ ಕರಗಿ ನೀರಾಗುವುದು. ಕಿತ್ತೂರು ಸಂಸ್ಥಾನದ ಪ್ರಜೆಗಳಾಕೆಯ ಗುಣಗಾನ ಮಾಡುತ್ತಿದ್ದುದು ಮಾತ್ರವಲ್ಲ; ಆಕೆಯನ್ನು ದೇವಿಯೆಂದೇ ಭಾವಿಸಿ, ಪೂಜಿಸುತ್ತಿದ್ದರು. ಇಂದಿಗೂ ಕಿತ್ತೂರು ಚೆನ್ನಮ್ಮ ರಾಣಿಯ ಸ್ಮರಣೆಯು ಹಾಡುಗಳಲ್ಲಿ, ಲಾವಣಿಗಳಲ್ಲಿ, ಭಾವಗೀತೆಗಳಲ್ಲಿ, ಸುರಕ್ಷಿತ ವಾಗಿದೆ. ಕನ್ನಡಿಗರ ನಾಲಿಗೆಗಳಲ್ಲಿ ಆಕೆಯ ಹೆಸರು ನುಡಿಯು ತ್ತಿದೆ. "[6]

ಕಿತ್ತೂರ ರಾಣಿಯ ಸಮಾಧಿಯನ್ನು ನೋಡಿ ಕವಿಗಳೊಬ್ಬರು ಹಾಡಿದ ಹದಿನಾರು ಚರಣಗಳಲ್ಲಿ—

[7] " ಭಾರತದ ಭಾಗ್ಯ ನವನಭೋವಲಯ ದೇದೀಪ್ಯತಾರೆ ನೀನು !
ನಿಜ ಕ್ಷಾತ್ರ ತೇಜದುಗ್ರತೆಯ ತೋರಿ ನೆರೆಮಾಳ್ಪ ತಪವಿದೇನು ?

---

6 "Daughter of the Desai of Kagati, she was conversant with state craft from her younger days. She used to love the sword, horse riding and archery. Later on in the company of her illustrious husband Mallasurja Desai, she learnt the art of warfare. She was a shrewd and bold queen and would go all out to secure the welfare of her subjects irrespective of caste and creed. She was known for her kindness to children which was reflected in the safe return of 12 British children that were arrested and brought to her during the Kithur hostilities. She had also a soft corner for the destitute and decrepit. The people of Kithur State admired her virtues and adored her like a Devi. Her memory is enshrined in ballads, songs, and sonnets which live in the tongues of Kannada people even to-day."

—*F.M.C., Bombay.*

7 ಶ್ರೀ ಎಸ್. ಡಿ. ಇಂಚಲ, ಬಿ.ಎ., ಬಿ.ಟಿ., 'ಕಿತ್ತೂರ ಬಂಡಾಯ', ಪುಟ 48. ಕಿತ್ತೂರು ಚೆನ್ನಮ್ಮ ರಾಣಿ ಇತಿಹಾಸಮಂಡಲ, ಬೈಲಹೊಂಗಲ.

ಬಲಿದಾನ ಥಲಕೆ, ಸ್ವಾತಂತ್ರ್ಯ ಫಲಕೆ, ನೀನೆಸಪ ಯೋಗವೇನು ?
ಕರ್ಣಾಟ ರತ್ನ ಸಿಂಹಾಸನಕೆ ನೆರೆವೊಳ್ಪ ತಪವಿದೇನು ?

ಧೀರ ರಾಜ, ಋಷಿ, ಕರ್ಮವೀರ, ಕವಿ, ಗಂಡುಗಲಿಗಳಿಂದ,
ತಾನಾಯ್ತು ಕಾಡು, ಸಿಂಗರದ ಬೀಡು, ನೆರೆ ನಿನ್ನ ಪುಣ್ಯದಿಂದ.

ಹಳೆಯದನ್ನು ತುಳಿತುಳಿದು, ಹೊಸತು ಚೈತನ್ಯವನ್ನು ತುಂಬು.
'ನವಜೀವಬಿಂದು, ಸಾಹಸದ ಸಿಂಧು' ಆಗೆಂದು ಹರಸು ಇಂದು !

ಮುಂಬೆಳಗ ತೋರ್ವ, ಹುಂಬಣ್ಣ ಬೀರ್ವ, ಮಂಗಳದ ಕಿರಣದಂತೆ ;
ಕನ್ನಡದ ಸಿರಿಯು ಮತ್ತೊಮ್ಮೆ ಮೆರೆಯಲಿನ್ನೊಮ್ಮೆ ಮೂಡು, ಮಾತೆ !"

ಇವೈದನ್ನು ಎತ್ತಿಕೊಡಲಾಗಿದೆ.

ಮಲ್ಲಸರ್ಜ ದೇಸಾಯಿ ೧೭೮೨ರಿಂದ ೧೮೧೬ ರವರೆಗೆ ಆಳಿದ. ಅವನ ಮರಣಾನಂತರ ಹಿರಿಯ ರಾಣಿ ರುದ್ರವ್ವನ ಮಗ ಶಿವಲಿಂಗ ರುದ್ರ ಸರ್ಜ ಪಟ್ಟಕ್ಕೆ ಬಂದ. ತಂದೆಯಂತೆ ಇವನೂ ಸಾಹಸಿ, ಸಾಹಿತಿ; ದೂರದೃಷ್ಟಿಯುಳ್ಳವ. ಪುಣೆಯ ಪಾದಷಾಹಿಯ ಗ್ರಹಣಕಾಲ ಸಮೀಪಿಸಿತೆಂದರಿತು ಸರ್ ಜಾನ್ ಮನ್ರೋ ಸೇನಾಪತಿಯೊಂದಿಗೆ ಒಪ್ಪಂದ ಮಾಡಿಕೊಂಡ. ಕ್ಷಯರೋಗಕ್ಕೆ ತುತ್ತಾಗಿ, ೧೮೨೪ ರಲ್ಲಿ ದೈವಾಧೀನನಾದ.

ಶಿವಲಿಂಗ ಸರ್ಜನಿಗೆ ಮಕ್ಕಳಿಲ್ಲ. ಆದಕಾರಣ ದರಬಾರಿನವರೆಲ್ಲ ಸೇರಿ ಮಾಸ್ತಮರಡಿ ಗೌಡರ ಮಗನನ್ನು ಆ ದೇಸಾಯಿಯ ದತ್ತುಪುತ್ರನನ್ನಾಗಿ ಮಾಡಿದರು. ದತ್ತಕನ ಹೆಸರಿನಿಂದ ರಾಣಿ ಚೆನ್ನಮ್ಮಾಜಿ ರಾಜ್ಯಭಾರ ನಡೆಸಲಾರಂಭಿಸಿದಳು.

ಭೂದಾಹದ ಬ್ರಿಟಿಷರ ಕಣ್ಣು ಕಿತ್ತೂರು ಸಂಸ್ಥಾನದಮೇಲೆ ಬಿತ್ತು. ೧೮೦೦ ರ ಅನಂತರ ಕಂಪೆನಿ ರಾಜ್ಯ ವಿಸ್ತಾರ ನಾನಾ ಬಗೆಯಾಗಿ ಆಗುತ್ತ ಬಂತು. ಕಿತ್ತೂರು ಸಂಸ್ಥಾನವೊಂದು ಮಾತ್ರ ಅವರ ಪರಮಾಧಿಕಾರವಲಯದಿಂದ ಹೊರಗಿರುವುದನ್ನವರು ಸಹಿಸಲು ಸಾಧ್ಯವೆ? ಏನಾದರೊಂದು ನೆಪದಿಂದ ಆ ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಆಂಗ್ಲರು ಹೊಂಚುಹಾಕುತ್ತಿದ್ದರು. ಧಾರವಾಡದ 'ಕಲೆಕ್ಟರ್' ಥ್ಯಾಕರೆ ೧೮೨೨ ರಲ್ಲೇ ಕಿತ್ತೂರು ದೇಸಾಯಿಗೆ ಪತ್ರ ಬರೆದಿದ್ದ. 'ಕಳ್ಳಕಾಕರಿಗೆ ಆಶ್ರಯ ಕೊಡುತ್ತಿದ್ದೀಯೆ. ಸುತ್ತಮುತ್ತಣ ಪ್ರಾಂತ್ಯದ ಜನರಿಗೆ ತೊಂದರೆಯಾಗುತ್ತಿದೆ' ಹೀಗೆಲ್ಲ ಆಪಾದನೆ ಮಾಡಿ, ಹೆದರಿಸಿದ್ದ. ಇದರಿಂದ ಆಂಗ್ಲರ ಉದ್ದಿಶ್ಯವೇನೆಂಬುದು ಸ್ಪಷ್ಟವಾಗಿ ಸೂಚಿತವಾಗುತ್ತದೆ. ಕಿತ್ತೂರನ್ನು ಕಬಳಿಸಲು ನೆಪವೊಂದು ಬೇಕಾಗಿತ್ತು ; ಅದಕ್ಕಾಗಿ ಅವರು ಕಾದಿದ್ದರು. ದತ್ತಕನ ಪ್ರಕರಣ ಅವರಿಗೆ ಈ ಅವಕಾಶವನ್ನೊದಗಿಸಿ ಕೊಟ್ಟಿತು.

"ಸಂಸ್ಥಾನದಲ್ಲಿ ಇಬ್ಬಣವಾಗಲಿಕ್ಕೆ ಬ್ರಿಟಿಷರ ಮುತ್ಸದ್ದಿತನವೇ ಕಾರಣವೆಂದು ಅನೇಕ ಕಾಗದಗಳಿಂದ ತಿಳಿದುಬರುತ್ತದೆ. ಚೆನ್ನಮ್ಮರಾಣಿ ಮತ್ತು ಸೊಸೆ ವೀರವ್ವತಾಯಿ (ಶಿವಲಿಂಗಪ್ರಭುಗಳ ಪತ್ನಿ) ಇಬ್ಬರಲ್ಲಿ ವೈಷಮ್ಯ ಉಂಟಾಗಲಿಕ್ಕೆ ದತ್ತಕ ವಿಷಯವೇ ಮೂಲವಾಯಿತು. ಶಿವಲಿಂಗ ಪ್ರಭುಗಳು ಸಾಯುವ ಮುಂಚೆಯೇ ಮಾಸ್ತಮರಡಿಯ ಗೌಡರ ಮಗನಿಗೆ ದತ್ತಕ ಪಟ್ಟಗಟ್ಟಿದ್ದಾರೆಂದು ಮಲ್ಲಪ್ಪಶೆಟ್ಟಿ ಖನ್ನೂರ ಇವರಿಂದ 'ರಸಿಡೆಂಟ'ರಿಗೆ ವರದಿಗಳು ಹೋದವು. ಅಲ್ಲದೆ ಸಂಸ್ಥಾನದ ಗುಟ್ಟುಗಳನ್ನು ಮಲ್ಲಪ್ಪಶೆಟ್ಟರಿಂದ ಸಂಗ್ರಹಿಸಲಾಗಿತ್ತು. ಚೆನ್ನಮ್ಮರಾಣಿಗೆ ಈ ಕುಟಿಲ ಕಾರಸ್ಥಾನ ಮನಸ್ಸಿಗೆ ಬರಲಿಲ್ಲ. ಈ ದತ್ತಕ ವಿಧಾನ ಹಾಗೂ ರಾಜ್ಯ ಕಾರಭಾರದ ಬಗ್ಗೆ ಬ್ರಿಟಿಷರ ಮತ್ತು ಚೆನ್ನಮ್ಮ ರಾಣಿಯ ನಡುವೆ ನಡೆದ ಪತ್ರವ್ಯವಹಾರಗಳು ಒಳ್ಳೆ ಗಮನಾರ್ಹವಾಗಿರುತ್ತವೆ. ಈ ದತ್ತಕ ಚವಕಸಿಯ ನೆಪಮಾಡಿಕೊಂಡು ಥ್ಯಾಕರೆ ದೊರೆಯು ಪುನಃ ಕಿತ್ತೂರಿಗೆ ಬಂದನು. ಅತ್ತೆ-ಸೊಸೆಯರ ನಡುವೆ ದತ್ತಕದ ಬಗ್ಗೆ ಭಿನ್ನಾಭಿಪ್ರಾಯಗಳಿವೆಯೆಂದು ವರದಿಮಾಡಿ, ಸಂಸ್ಥಾನವನ್ನು ದಸ್ತಗೀರುಮಾಡಿ, ಆಡಳಿತೆಯನ್ನು ಖನ್ನೂರ ಮಲ್ಲಪ್ಪಶೆಟ್ಟಿ ಮತ್ತು ವೆಂಕಟರಾವ ಕಾರಭಾರಿಗಳಿಗೆ ಒಪ್ಪಿಸಿ, ಯಾವತ್ತು ಧನ ದೌಲತ್ತು, ವಸ್ತು ಒಡವೆಗಳನ್ನು ಸೀಲಬಂದಮಾಡಿ, ಹೋಗಿಬಿಟ್ಟನು."[8]

ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಆಂಗ್ಲರಿಗೆ ಒಳ್ಳೆ ಅವಕಾಶ ಸಿಕ್ಕಿತು. ಗಂಡು ಸಂತಾನವಿಲ್ಲದಿದ್ದರೆ ಅರಸು ಮನೆತನ ಮುಳುಗುವುದು ; ರಾಜ್ಯಸ್ವಾಹಾ ಆಗುವುದೆಂಬ ತತ್ವದ ಆಚರಣೆಯು (ಡಾಕ್ಟ್ರೀನ್ ಆಫ್ ಲ್ಯಾಪ್ಸ್) ಕಿತ್ತೂರಿನಿಂದಲೇ ಪ್ರಾರಂಭವಾದಂತೆ ಕಂಡುಬರುತ್ತದೆ. "ದತ್ತಕನನ್ನು ಮನ್ನಿಸುವುದಿಲ್ಲ. ದತ್ತಕನು ದೇಸಾಯರ ವಂಶಜನೆಂದು ಕಂಡುಬಂದರೆ ಅದರಂತೆ ವಿಚಾರಿಸಿ ತಿಳಿಸಬೇಕು" ಎಂದು ಕಂಪನಿ ಸರಕಾರದವರು ಥ್ಯಾಕರೆಗೆ ಅಪ್ಪಣೆಕೊಟ್ಟರು. 'ಕೆಲವು ತಿಂಗಳ ಹಿಂದೆ, ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದ ದೇಸಾಯಿಯನ್ನು ನೋಡಲು ಹೋಗಿದ್ದೆ. ಆಗ ಆತ ದತ್ತು ತೆಗೆದುಕೊಳ್ಳುವ ಮಾತನ್ನೇ ಎತ್ತಲಿಲ್ಲ. ದೇಸಾಯಿ ಮನೆತನದಲ್ಲಿ ಉಳಿದಿರುವವರು ವಿಧವೆಯರು ಮೂವರೇ ; ಮಲತಾಯಿ ಚೆನ್ನಮ್ಮ, ಹೆಂಡತಿ ವೀರವ್ವ, ತಮ್ಮನ ಹೆಂಡತಿ ; ದೇಸಾಯಿಗಳ ಸಮೀಪಬಂಧು ಗಣದವರು ಮತ್ತೆಯಾರೂ ಇಲ್ಲ. ದತ್ತಕನು ದೇಸಾಯಿಗಳ ಮನೆತನದ ಸಮೀಪ ಬಂಧುವಲ್ಲ. ದತ್ತುಸ್ವೀಕಾರ ನಿಜವೆಂದು ತಿಳಿದರೂ ಕೂಡ ಹುಡುಗ ತೀರ ಸಣ್ಣವ. ಬ್ರಿಟಿಷ್ ಸರಕಾರವೇ ಆಡಳಿತ ನಡಸತಕ್ಕದ್ದು'. ಈ ರೀತಿಯಾಗಿ ಥ್ಯಾಕರೆ ಸರಕಾರಕ್ಕೆ ವರದಿಮಾಡಿದ.

---

[8] ಕಿತ್ತೂರ ಬಂಡಾಯ. ಪುಟ 67-68. ಕಿತ್ತೂರ ಚೆನ್ನಮ್ಮ ರಾಣಿ ಇತಿಹಾಸ ಮಂಡಲ, ಬೈಲಹೊಂಗಲ.

ಸಂಸ್ಥಾನಕ್ಕೆ ಮಹಾವಿಪತ್ತೊದಗಿತು. ಬ್ರಿಟಿಷರ ಕುಟಿಲ ನೀತಿ ನಡತೆಗಳನ್ನು ಕಂಡು ಚೆನ್ನಮ್ಮಾಜಿಗೆ ಅಸಾಧ್ಯ ಕೋಪಬಂತು. ಸ್ವಾಭಿಮಾನ, ದೇಶಾಭಿಮಾನ, ದೇಶದ ಸ್ವಾತಂತ್ರ್ಯ, ಇವೆಲ್ಲ ಆಕೆಯನ್ನು ಕಿಡಿಕಿಡಿಮಾಡಿದುವು. ಎಂತಹ ವಿಪತ್ತೇಬರಲಿ, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲೇಬೇಕೆಂದು ಚೆನ್ನಮ್ಮ ದೃಢನಿಶ್ಚಯಮಾಡಿದಳು. ಸಾಧ್ಯವಾದರೆ ಸಾಮೋಪಾಯ; ಇಲ್ಲವಾದರೆ ದಂಡೋಪಾಯ; ಯಾವಮಾರ್ಗವಾದರೂ ಸೈ. ಸಂಸ್ಥಾನದ ಅಸ್ತಿತ್ವವನ್ನು ಉಳಿಸಬೇಕು; ಸ್ವಾತಂತ್ರ್ಯ ಸಂರಕ್ಷಣೆಯಾಗಬೇಕೆಂದು ಪ್ರತಿಜ್ಞೆಮಾಡಿದಳು. ಮೊದಲು ಸಾಮೋಪಾಯಕ್ಕಾರಂಭಿಸಿದಳು. ಕಿತ್ತೂರು ಸಂಸ್ಥಾನದ ಪರವಾಗಿ ಸಂಧಾನ ನಡೆಸಲು ಲಿಂಗಭಟ್ಟ, ರಾಚಪ್ಪ, ಎಂಬಿಬ್ಬರು ವಕೀಲರನ್ನು ಕಂಪೆನಿ ಸರಕಾರಕ್ಕೆ ಕಳುಹಿಸಿದಳು. ಕಿತ್ತೂರು ಕೋಟೆಕೊತ್ತಲಗಳನ್ನು ಭದ್ರಗೊಳಿಸಲು, ಸೈನ್ಯವನ್ನು ಸಜ್ಜುಗೊಳಿಸಲು, ಆಜ್ಞೆಮಾಡಿದಳು. ಅಂಬಡಗಟ್ಟಿ, ನಿಚ್ಚಣಕಿ, ಮೊದಲಾದ ಸ್ಥಳಗಳಲ್ಲಿದ್ದ ಸರದಾರ, ಶಿಲೆದಾರ, ಮಾನಕರಿಗಳನ್ನು ಕರೆಸಿಕೊಂಡು, ಕಾರಭಾರಿಗಳೊಂದಿಗೆ ಆಲೋಚನೆ ನಡೆಸಿ, ಸಂಗ್ರಾಮ ಸನ್ನದ್ಧಳಾದಳು. ಕೋಟೆ ಬತೇರಿಗಳಮೇಲೆ ತೋಪುಗಳನ್ನೇರಿಸಿದಳು. ಕಂದಕಗಳಮೇಲೆ ಸಶಸ್ತ್ರ ಸವಾರರನ್ನು ಕಾವಲಿರಿಸಿದಳು. ಎಲ್ಲಬಗೆಯ ಎಚ್ಚರಿಕೆಗಳನ್ನೂ ತೆಗೆದುಕೊಂಡಳು. 'ಈ ವಿಪತ್ತಿನಿಂದ ಪಾರಾಗಲು ಸಹಾಯ ನೀಡಬೇಕು' ಎಂದು ಕೊಲ್ಲಾಪುರದರಸನನ್ನು ಪ್ರಾರ್ಥಿಸಿ, ಅಲ್ಲಿಗೆ ರಾಯಭಾರಿಯನ್ನಟ್ಟಿದಳು. ಕೊಲ್ಲಾಪುರದರಸ ಬ್ರಿಟಿಷರ ಕೈಗೊಂಬೆ. ಚೆನ್ನಮ್ಮನ ರಾಯಭಾರಿಯನ್ನು ಆ ಮಹಾರಾಜ ಬ್ರಿಟಿಷರಿಗೊಪ್ಪಿಸಿಬಿಟ್ಟ!

ರಾಣಿ ಚೆನ್ನಮ್ಮಾಜಿಯ ಸಮರಸನ್ನಾಹ ಕಂಡು ಬ್ರಿಟಿಷರಿಗೆ ಎದೆಯುಳುಕಿತು. ಥ್ಯಾಕರೆಯು ತನ್ನ ಬಲಪ್ರದರ್ಶನಮಾಡಿ, ರಾಣಿಯನ್ನು ಹೆದರಿಸಿ, ಕಿತ್ತೂರನ್ನು ವಶಪಡಿಸಿಕ್ಕೊಳ್ಳಲು ಪ್ರಯತ್ನಮಾಡಿದ. ೧೮೨೪ ನೇ ಅಕ್ಟೋಬರ್ ೨೧ನೇ ಮಹಾನವಮಿಯ ದಿನ ಕಪ್ತಾನ ಬ್ಲಾಕ್ ನೊಂದಿಗೆ, ೫೦೦ ಸೈನಿಕರೊಂದಿಗೆ, ತೋಪುಸಹಿತ ಥ್ಯಾಕರೆ ಕಿತ್ತೂರಿಗೆ ಬಂದಿಳಿದ. ಚೆನ್ನಮ್ಮ ರಾಣಿಯಾದರೂ ಕೋಟೆಯ ಬಾಗಿಲುಗಳನ್ನು ಭದ್ರಪಡಿಸಿದಳು. ಕಾಪಿನ ಭಟರಾದರೂ ಕೋಟೆಯ ಸಂರಕ್ಷಣೆಯಲ್ಲಿ ನಿಯುಕ್ತರಾಗಿದ್ದರು. ಆಂಗ್ಲಸೈನ್ಯಗಳು ಕೋಟೆಯ ಬಾಗಲಬಳಿ ಬಂದವು. ಸೈನ್ಯಾಧಿಕಾರಿಗಳು "ಇಪ್ಪತ್ತು ನಿಮಿಷಗಳೊಳಗಾಗಿ ಕೋಟೆಯ ಬಾಗಿಲುಗಳನ್ನು ತೆರೆದರೆ ಸರಿ. ಇಲ್ಲವಾದರೆ ಮುತ್ತಿಗೆಹಾಕಿ, ಲಗ್ಗೆ ಹತ್ತುತ್ತೇವೆ'' ಎಂದು ಎಚ್ಚರಿಕೆಯ ಘೋಷಣ ಮಾಡಿದರು. ಚೆನ್ನಮ್ಮಾಜಿ ಯುದ್ಧಕ್ಕೆ ಸಿದ್ಧಳಾದಳು. ಸರದಾರ ಗುರುಸಿದ್ದಪ್ಪನ ನಾಯಕತ್ವದಲ್ಲಿ, ಕಿತ್ತೂರು ಯೋಧರು ರಣರಂಗಕ್ಕಿಳಿದರು. ಇಪ್ಪತ್ತು ನಿಮಿಷಗಳ ಅವಧಿ ಪೂರೈಸಿತು. ಕಪ್ತಾನ ಬ್ಲಾಕ್, ಕಪ್ತಾನ ಸಿವೆಲ್, ಲೆಫ್ಟಿನೆಂಟ್ ಡೈಟನ್‌ಗಳು ಮುಂದುವರಿದರು. ಅವರಿನ್ನೇನು ಕೋಟೆಯ ಬಾಗಿಲುಗಳನ್ನು ಮುತ್ತಬೇಕು. ಅಷ್ಟರಲ್ಲಿ ಸರದಾರ ಗುರುಸಿದ್ದಪ್ಪನು ತನ್ನ ಸೈನ್ಯದೊಂದಿಗೆ ಬ್ರಿಟಿಷ್ ಸೈನ್ಯದಮೇಲೆ ಬಿದ್ದ. ಆಂಗ್ಲರಿಗೂ ಕಿತ್ತೂರರವರಿಗೂ ಘೋರ ಕದನವಾಯಿತು. ಆಂಗ್ಲ ಸೇನಾನಾಯಕರೆಲ್ಲ ಉರುಳಿ, ಸತ್ತರು. ಅನೇಕ ಸೈನಿಕರು ಹತರಾದರು. ಚೆನ್ನಮ್ಮ ರಾಣಿಯು

ಅಶ್ವಾರೂಢಳಾಗಿ, ಬಿಚ್ಚುಗತ್ತಿ ಹಿಡಿದು, ರಣರಂಗ ಪ್ರವೇಶಮಾಡಿದಳು. ಅಮಟೂರ ಸಯ್ಯದನವರ ಬಾಳಾಸಾಹೆಬನೆಂಬ ಮುಸ್ಲಿಂ ವೀರ ರಾಣಿ ಚೆನ್ನಮ್ಮಾಜಿಯ ಮೈಗಾವಲಿಗೆ ನಿಂತ. ಆಂಗ್ಲ ಸೈನಿಕರು ಮುನ್ನುಗ್ಗುತ್ತಿರುವುದನ್ನು ಕಂಡು, ರಾಣಿಯನ್ನು ಸಂಬೋಧಿಸಿ "ತಾಯೀ! ವೈರಿಗಳ ಬಂದೂಕುಗಳು ನಮ್ಮ ಕಡೆಗೆ ಗುರಿಯಾಗುತ್ತಿವೆ. ತಡಬೇಡ, ನನಗೆ ಅಪ್ಪಣೆಕೊಡಿ" ಎಂಬದಾಗಿ ಬೇಡಿದ. ರಾಣಿಯ ಅಪ್ಪಣೆಯಾಗುವುದಕ್ಕೆ ಮೊದಲೇ ಢಂ! ಢಂ! ಸದ್ದಾಯಿತು. ಬಾಳಪ್ಪನು ಥ್ಯಾಕರೆಗೆ ತನ್ನ ಬಂದೂಕನ್ನು ಗುರಿಯಿಟ್ಟು ಹೊಡೆದ. ಥ್ಯಾಕರೆಯು ಕುದುರೆಯ ಮೇಲಿಂದ ಧೊಪ್ಪನೆ ನೆಲಕ್ಕುರುಳಿದ. ಬ್ರಿಟಿಷ್ ಸೈನಿಕರು ಸತ್ತರು, ನೊಂದರು, ದಿಕ್ಕಾಪಾಲಾಗಿ ಓಡಿದರು. ಆಂಗ್ಲರ ಪರಾಭವವಾಯಿತು. ಹತ್ತೊಂಬತ್ತು ಆಂಗ್ಲ ಸೈನಿಕರನ್ನೂ, ಅವರ ಚಿಕ್ಕಪುಟ್ಟ ಮಕ್ಕಳನ್ನೂ ಬಂಧಿಸಿ, ಸುವ್ಯವಸ್ಥೆಯಿಂದ ಅವರನ್ನೆಲ್ಲ ಸ್ಥಾನಬದ್ಧಮಾಡಲಾಯಿತು. ಸ್ಟೀವೆರ್ಸನ್, ಪೊಲಿಟಿಕಲ್ ಏಜಂಟ್ ಇಲಿಯಟ್, ಕೈಸೆರೆ ಸಿಕ್ಕಿದವರಲ್ಲಿ ಮುಖ್ಯರು. ಈ ರೀತಿಯಾಗಿ ಕಿತ್ತೂರು ಕೋಟೆಯ ಮುತ್ತಿಗೆಯಲ್ಲಿ ರಾಣಿ ಚೆನ್ನಮ್ಮಾಜಿಗೆ ಪೂರ್ಣ ಜಯವಾಯಿತು.

ಕನ್ನಡ ಮಹಿಳೆ, ಕಿತ್ತೂರು ರಾಣಿಗೆ ಸೋತು, ಆಂಗ್ಲಸೈನ್ಯ ಅನುಭವಿಸಿದ ಕಷ್ಟ, ನಷ್ಟ, ಅಪಮಾನದ ಸುದ್ದಿ ಬ್ರಿಟಿಷ್ ಅಧಿಕಾರಿಗಳಿಗೂ, ಮುಂಬಯಿ ಗವರ್ನರಿಗೂ ಮುಟ್ಟಿತು. ಬೆಳಗಾವಿಯಲ್ಲಿ ಆಂಗ್ಲ ಸೈನ್ಯವಿತ್ತು; ಆದರೆ ಸಾಕಾದಷ್ಟು ಬಲಯುತವಾಗಿರಲಿಲ್ಲ. ಆದಕಾರಣ ಮುಂಬಯಿ, ಸೊಲ್ಲಾಪುರ, ಬಳ್ಳಾರಿ ಮತ್ತೆ ಇತರ ಸ್ಥಳಗಳಿಂದೆಲ್ಲ ಸೈನ್ಯಗಳನ್ನು ಬರಮಾಡಿಕೊಂಡು, ಒಂದುಗೂಡಿಸಿದರು. ದಕ್ಷಿಣ ಭಾರತದ ಕಮಿಷನರಾಗಿದ್ದ ಚಾಪ್ಲಿನ್, ಕರ್ನಲ್ ಸಿ. ಬಿ. ಡೀಕರ್ ಮೊದಲಾದವರು ಸುಸಜ್ಜಿತ ಸೈನ್ಯಸಹಿತ, ಕಿತ್ತೂರ ಮೇಲೆ ಧಾಳಿ ಬಂದರು. ಯುದ್ಧಾರಂಭಕ್ಕೆ ಮೊದಲು ಬಂಧನದಲ್ಲಿದ್ದ ಆಂಗ್ಲರ ಬಿಡುಗಡೆ ಮಾಡಿಸುವುದು ತನ್ನ ಕರ್ತವ್ಯವೆಂದರಿತು ಚಾಪ್ಲಿನ್ ಪ್ರಯತ್ನಮಾಡಿದ. 'ಕಿತ್ತೂರಿನ ಆಡಳಿತದಲ್ಲಿ ಆಂಗ್ಲರು ಪ್ರವೇಶಮಾಡುವುದಿಲ್ಲವೆಂಬ ಭರವಸೆಯನ್ನು ಅಧಿಕಾರಿಗಳು ಕೊಡುವವರೆಗೆ ಬಂದಿಗಳ ಬಿಡುಗಡೆಯ ಮಾತೇ ಇಲ್ಲ' ಎಂಬದಾಗಿ ಚೆನ್ನಮ್ಮಾಜಿ ಹೇಳಿಬಿಟ್ಟಳು. ಬ್ರಿಟಿಷ್ ಅಧಿಕಾರಿಗಳು ಕಷ್ಟಕ್ಕೆ ಸಿಕ್ಕಿದರು. ಕಡೆಗೆ ಒಂದು ಪ್ರಕಟನೆಯನ್ನು ಹೊರಡಿಸಿದರು. ಆಂಗ್ಲ ಸೆರೆಯಾಳುಗಳನ್ನೆಲ್ಲ ಬಿಡುಗಡೆಮಾಡಿ. ಹಾಗೆ ಮಾಡಿದ್ದಾದರೆ ಸರದಾರ ಗುರುಸಿದ್ದಪ್ಪನೊಬ್ಬನನ್ನು ಬಿಟ್ಟು ಉಳಿದವರನ್ನೆಲ್ಲ ಕಂಪೆನಿ ಸರಕಾರವು ಕ್ಷಮಿಸುತ್ತದೆ. ಅಷ್ಟುಮಾತ್ರವಲ್ಲ. ಗುರುಸಿದ್ದಪ್ಪನಿಗೂ ಜೀವದಾನ ಮಾಡಲಾಗುತ್ತದೆ ಯೆಂಬದಾಗಿ ಸಾರಿದರು. 'ಬಂದಿಗಳ ಜೀವಕ್ಕೆ ಕಿತ್ತೂರು ನಾಯಕರು ಹೊಣೆ'ಯೆಂದೂ ಎಚ್ಚರಿಸಿದರು. ರಾಣಿ ಚೆನ್ನಮ್ಮಾಜಿಯು ಈ ಎಚ್ಚರಿಕೆಗಳಿಗೂ, ಬೆದರಿಕೆಗಳಿಗೂ, ಕಿವಿಗೊಡಲಿಲ್ಲ. ಕಿತ್ತೂರಿನ ಸ್ವಾತಂತ್ರ್ಯಕ್ಕೆ ಅಲ್ಪಾಂಶ ಊನ ಬರುವಂತಹ ಯಾವ ವಿಧಿಗಳಿಗೂ ಚೆನ್ನಮ್ಮ ಸಿದ್ಧಳಾಗಿರಲಿಲ್ಲ. ಬೇರೆ ದಾರಿಯೇ ಇಲ್ಲವಾಯಿತು; ಯುದ್ಧ ಅನಿವಾರ್ಯವಾಯಿತು. ಕಿತ್ತೂರು ನಾಡಿನ ವೀರಭಟರೆಲ್ಲ ರಾಣಿ ಚೆನ್ನಮ್ಮಾಜಿಯ ಸಂಗ್ರಾಮ ಡಂಗುರಕ್ಕೆ ಮಾರುತ್ತರ ಕೊಟ್ಟರು. ಆರು ಸಾವಿರ ಸೈನಿಕರು ಬಂದು ಸೇರಿದರು.

ಆಂಗ್ಲರದು ಅಪಾರ ಸೈನ್ಯ. ಅದರೊಂದಿಗೆ ಹೋರಾಡುವುದಷ್ಟು ಸುಲಭ ವಲ್ಲವೆಂಬುದು ರಾಣಿ ಚೆನ್ನಮ್ಮಾಜಿಗೆ ಚೆನ್ನಾಗಿ ಗೊತ್ತಿತ್ತು. ಆದರೂ ಆಕೆಯ ದೇಶಾಭಿಮಾನ, ಸ್ವಾತಂತ್ರ್ಯಪ್ರೇಮ, ಆಕೆಯ ಸೈನಿಕರ ಸ್ವಾಮಿಭಕ್ತಿ ಇವೆಲ್ಲ ಆಕೆಯ ಧೀರ ಸಂಕಲ್ಪವನ್ನು ನೂರ್ಮಡಿಗೊಳಿಸಿತು. ಸಾಮ್ರಾಜ್ಯಶಾಹಿಗೆ ಶರಣು ಹೋಗತಕ್ಕ ಮನೋಧರ್ಮವಲ್ಲ ಈ ಸಾಧ್ವೀಮಣಿಯದು. ಕಿತ್ತೂರು ಕುರುಕ್ಷೇತ್ರವಾಯಿತು. ವೀರ ರಮಣಿಯೂ, ಆಕೆಯ ವೀರ ಯೋಧರೂ, ಅಪೂರ್ವ ಪರಾಕ್ರಮದಿಂದ ಹೋರಾಡಿದರು. ಮೂರುದಿನಗಳಕಾಲ ಕಿತ್ತೂರು ಕದನವಾಯಿತು. ಕಿತ್ತೂರಿಗೆ ಸೋಲು ಸಿದ್ಧವೆನಿಸಿತು. ಜತೆಗೆ ಭಾರತದ ಸ್ವಾತಂತ್ರ್ಯವಿನಾಶಕ್ಕೆ ಸಹಜಕಾರಣವಾದ 'ದ್ರೋಹ ಕರ್ಮ' ವೂ ಸೇರಿತು. ಕೋಟೆಯೊಳಗೆ ಪಿತೂರಿನಡೆಯಿತು. ವಿಶ್ವಾಸಘಾತಕರು ಶತ್ರುಗಳ ಕೈ ಬಲಪಡಿಸಿದರು. ಆಂಗ್ಲರ ಗುಂಡಿನ ಮಳೆ ಬಲವಾಯಿತು. ಕಿತ್ತೂರು ಕೋಟೆ (೧೮೨೪ನೆ ಡಿಸೆಂಬರ್) ಆಂಗ್ಲರ ವಶವಾಯಿತು. ಕಿತ್ತೂರು ಕೋಟೆ ರಕ್ತದ ಮಡುವಾಯಿತು. ಹೆಣಗಳು ರಾಶಿ ರಾಶಿಯಾಗಿ ಬಿದ್ದವು.

ಶತ್ರುಗಳ ಕೈಗೆ ಸಿಗಬಾರದೆಂದು ಚೆನ್ನಮ್ಮ ಕೋಟೆಯ ಕಿರಿ ಗಿಂಡಿಯಿಂದ ಪಾರಾದಳು. ಸಂಗೊಳ್ಳಿಯ ಮಾರ್ಗವಾಗಿ ಓಡಿದಳು. ಆಂಗ್ಲ ಸೈನಿಕರಾಕೆಯನ್ನು ಹಿಂಬಾಲಿಸಿದರು. ರಾಣಿಯನ್ನು ಬಂಧಿಸಿದರು. ವಿಚಾರಣೆಮಾಡಿ, ಆಂಗ್ಲ ಅಧಿಕಾರಿಗಳಾಕೆಯನ್ನು ಬೈಲಹೊಂಗಲ ಕೋಟೆಯಲ್ಲಿ ಇಟ್ಟರು. ಇತ್ತ ಕಿತ್ತೂರಿನ ಲೂಟಿಯಾಗಿಹೋಯಿತು. ಕಿತ್ತೂರಿನ ಸಕಲ ಸಂಪತ್ತೂ ಸೂರೆಯಾಗಿ ಹೋಯಿತು. ಕಿತ್ತೂರು ರಾಜ್ಯದ ಮೇಲೆ ಪರಾಭವದ ಕಪ್ಪುಕಾಂಡಪಟವನ್ನೆಳೆದ ಹಾಗಾಯಿತು. ಕಿತ್ತೂರಿನ ಧ್ವಜ ಮಣ್ಣುಗೂಡಿತು. ಯೂನಿಯನ್ ಜಾಕ್ ಮುಗಿಲಿಗೇರಿತು. ಕಿತ್ತೂರಿನ ಸ್ವಾತಂತ್ರ್ಯ ನಾಶವಾಯಿತು.

ಸುಮಾರು ಐದು ವರ್ಷಗಳ ಕಾಲ ರಾಣಿ ಚೆನ್ನಮ್ಮಾಜಿಯು ಬೈಲ ಹೊಂಗಲದಲ್ಲಿ ಸ್ಥಾನಬದ್ಧಳಾಗಿ ಕಾಲನೂಕಿದಳು. ಬಂಧನದಲ್ಲಿದ್ದರೇನು ದೇಹ? ಆಕೆಯ ಮನೋಲೋಕ ಪೂರ್ಣ ಸ್ವಾತಂತ್ರ್ಯದಿಂದ ತುಂಬಿತ್ತು. ಬಂಧನದಲ್ಲಿದ್ದಷ್ಟು ಕಾಲವೂ ಆಕೆ ತನ್ನ ತಾಯ್ನಾಡಿನ ಸ್ವಾತಂತ್ರ್ಯ ಸ್ಫೂರ್ತಿಯಲ್ಲಿ ಮೈಮರೆತಿದ್ದಳು. ಗೋಪ್ಯವಾಗಿ ವಿಶ್ವಾಸಿ ಸರದಾರರಿಗೂ, ಸೈನಿಕರಿಗೂ, 'ಸಂಚಿನ ಸಂದೇಶ' ಗಳನ್ನು ಕಳುಹಿಸಿ, ಸ್ವಾತಂತ್ರ್ಯ ಸಾಧನೆಗಾಗಿ ಅವರನ್ನು ಹುರಿದುಂಬಿಸುತ್ತಿದ್ದಳು. ಸಂಗೊಳ್ಳಿ ರಾಯಣ್ಣನಂತಹ ನಿಸ್ಸೀಮ ದೇಶಭಕ್ತರು ಕ್ರಾಂತಿಯ ಧ್ವಜವನ್ನೆತ್ತಿ ಹಿಡಿದರೆ ಅದಕ್ಕೆ ಕಾರಣ ರಾಣಿ ಚೆನ್ನಮ್ಮಾಜಿ. ಈ ಬಗೆಯಾಗಿ ಸ್ವತಂತ್ರ ಕಿತ್ತೂರಿನ ಸವಿಕನಸನ್ನು ಕಾಣುತ್ತ, ತನ್ನ ಮಾತೃ ಭೂಮಿಯ ಕೀರ್ತಿಗಾನ ಮಾಡುತ್ತ, ಚೆನ್ನಮ್ಮಾಜಿಯು ತನ್ನ ಐವತ್ತೊಂದನೆಯ ವಯಸ್ಸಿನಲ್ಲಿ ೨-೨-೧೮೨೯ ನೇ ಶನಿವಾರದ ದಿನ ಕೈಲಾಸವಾಸಿಯಾದಳು.

"ಸ್ವಾತಂತ್ರ್ಯ ಇಲ್ಲವೆ ಸ್ವರ್ಗ"; "ಮಾಡು ಇಲ್ಲವೆ ಮಡಿ" ಇದೇ ರಾಣಿ ಚೆನ್ನಮ್ಮಾಜಿಯು ಕೇವಲ ಕಿತ್ತೂರು ಜನತೆಗೇಕೆ ಇಡೀ ಭಾರತ ಜನಾಂಗಕ್ಕೇ ಕೊಟ್ಟ ಸಂದೇಶ. ಬ್ರಿಟಿಷರೊಂದಿಗೆ ಒಪ್ಪಂದ ಮಾಡಿಕೊಂಡು, ಅಂದಿನ ಕಾಲದ ಹಲಕೆಲವು ಸಂಸ್ಥಾನಿಕರಂತೆ ಒಂದು ಬಗೆಯ 'ನೆಮ್ಮದಿಯ ಜೀವನ' ನಡೆಸುವುದು

ಚೆನ್ನಮ್ಮಾಜಿಗೆ ಅಷ್ಟೇನೂ ಕಷ್ಟವಾಗಿರಲಿಲ್ಲ. 'ಪಾರತಂತ್ರ್ಯ ಪ್ರಾಣಸಂಕಟ' ವೆಂಬ ನಂಬಿಕೆಯಿಂದ ಜೀವನ ನಡೆಸಿದ ಮಹಾ ವೀರಗಣಕ್ಕೆ ಸೇರಿದ ಸಾಧ್ವಿ ಚೆನ್ನಮ್ಮ. 'ನರಿಯಂತೆ ನೂರು ವರ್ಷ ಬಾಳುವುದಕ್ಕಿಂತ ಹುಲಿಯಂತೆ ಒಂದು ದಿನ ಬಾಳುವುದು ಲೇಸು' ಎಂದ, ಪರಾಕ್ರಮ ಧನ, ಅಭಿಮಾನ ಧನ, ಟೀಪು ಸುಲ್ತಾನನಂತಹ ವಿಭೂತಿಗಳ ಶ್ರೇಣಿಗೆ ಸೇರಿದವಳು ವೀರಮಾತೆ ಚೆನ್ನಮ್ಮ.

ಭಾರತದ ಸ್ವಾತಂತ್ರ್ಯ ಸಂಗ್ರಾಮದ ನಂದಾ ದೀವಿಗೆಯನ್ನು ಹಚ್ಚಿದ ಮಹಿಳಾಮಣಿಗಳಲ್ಲಿ ಅಗ್ರ ತಾಂಬೂಲ ರಾಣಿ ಚೆನ್ನಮ್ಮಾಜಿಗೆ ಸಲ್ಲುತ್ತದೆ. ಮೂವತ್ತುಮೂರು ವರ್ಷಗಳ ಅನಂತರ ಝಾನ್ಸಿಯ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ಸತ್ತು ಸ್ವರ್ಗಾಲಯಕ್ಕೇರಿದ ಲಕ್ಷ್ಮೀಬಾಯಿಗೆ ಕಿತ್ತೂರು ಚೆನ್ನಮ್ಮ ರಾಣಿ ಸ್ಫೂರ್ತಿಕಾರಣಳಾದಳೆಂದು ಹೇಳಬಹುದು.

---



ಕಿತ್ತೂರು ರಾಣಿ ಚೆನ್ನಮ್ಮ

[ಶ್ರೀ ಎಂ. ಎಸ್. ಸರದಾರ್, ಬಾರ್-ಅಟ್-ಲಾ,
ಅಡ್ವೊಕೇಟ್, ಬೆಂಗಳೂರು— ಇವರ ಕೃಪೆಯಿಂದ.

# ೫. ಸಂಗೊಳ್ಳಿ ರಾಯ ನಾಯಕ, ೧೮೨೯.

ಕಿತ್ತೂರು ರಾಣಿ ಚೆನ್ನಮ್ಮಾಜಿ ಕಾಲವಶಳಾದ ವರ್ಷವೇ ಆ ನಾಡಿನಲ್ಲಿ ಮತ್ತೊಬ್ಬ ನಾಯಕ, ಸ್ವಾತಂತ್ರ್ಯ ವೀರ, ಬೆಳಕಿಗೆ ಬಂದ. ಸಂಗೊಳ್ಳಿ ರಾಯ ನಾಯಕನೆಂದು ಅವನ ಹೆಸರು. ಸಂಗೊಳ್ಳಿ ರಾಯಣ್ಣನೆಂದೂ ಜನರು ಅವನನ್ನು ಪ್ರೀತಿ ಗೌರವಗಳಿಂದ ಕರೆಯುತ್ತಾರೆ. ಇವನು ಚೆನ್ನಮ್ಮ ರಾಣಿಯ ನೆಚ್ಚಿನ ಯೋಧ. ೧೮೨೪ ರಲ್ಲಿ ಬ್ರಿಟಿಷರನ್ನೆದುರಿಸಿದ ಚೆನ್ನಮ್ಮನ ಸಾಹಸಾವಸರದಲ್ಲೇ ರಾಯಣ್ಣ ಪರಾಕ್ರಮ ತೋರಿಸಿ, ಹೊಡೆದಾಡಿದ. ಕಿತ್ತೂರು ಪತನವಾದಾಗ ಅನೇಕರನ್ನು ಬ್ರಿಟಿಷರು ಬಂಧಿಸಿದರು. ಹಾಗೆ ಬಂಧನಕ್ಕೊಳಗಾದವರಲ್ಲಿ ಸಂಗೊಳ್ಳಿ ರಾಯಣ್ಣನೂ ಒಬ್ಬ. ಅವನು ಧಾರವಾಡದ ಸೆರೆಮನೆಯಲ್ಲಿ ಬಂದಿಯಾಗಿದ್ದ. ಕಿತ್ತೂರು ರಾಜ್ಯವನ್ನು ಬ್ರಿಟಿಷರು ವಶಪಡಿಸಿಕೊಂಡ ಮೇಲೆ ತಾವು ಮಹಾ ಉದಾರಿಗಳೆಂದು ತೋರಿಸಿಕೊಳ್ಳಲು, ಅದಕ್ಕಿಂತ ಹೆಚ್ಚಾಗಿ ತಮ್ಮ ಆಡಳಿತ ಕೌಶಲವನ್ನು ಪ್ರಕಟಿಸಿ ಜನರ ಸಹಾನುಭೂತಿಯನ್ನು ಸಂಪಾದಿಸಲು, ರಾಜ ಬಂದಿಗಳನೇಕರಿಗೆ ಕ್ಷಮಾದಾನ ಮಾಡಿ, ಬ್ರಿಟಿಷರು ಅವರನ್ನು ಬಿಡುಗಡೆ ಮಾಡಿದರು. ಹಾಗೆ ಬಿಡುಗಡೆ ಹೊಂದಿದವರಲ್ಲಿ ಸಂಗೊಳ್ಳಿ ರಾಯಣ್ಣನೂ ಒಬ್ಬ. ಬಿಡುಗಡೆಯಾದ ಮೇಲೆ ಅವನು ತನ್ನ ಸ್ವಗ್ರಾಮವಾದ ಸಂಗೊಳ್ಳಿಗೆ ಹೋದ. ಸಂಗೊಳ್ಳಿ ಗ್ರಾಮವು ಬೈಲಹೊಂಗಲದ ಬಳಿ, ಮಲಪ್ರಭಾ ನದಿಯ ದಡದಲ್ಲಿದೆ. ರಾಯಣ್ಣನೇನು ರಾಜವಂಶಕ್ಕೆ ಸೇರಿದವನಲ್ಲ; ಶ್ರೀಮಂತಗಣದವನೂ ಅಲ್ಲ; ಸಾಮಾನ್ಯ ಪ್ರಜೆ. ವಂಶ ಪಾರಂಪರ್ಯವಾಗಿ ಗ್ರಾಮದ ತಲವಾರಿಕೆ ಅವನ ವೃತ್ತಿ. ಗ್ರಾಮ ಸೇರಿದ ಮೇಲೆ ಗ್ರಾಮದ ತಲಾರಿಯಾದ. ಅವನ ಚಿತ್ತವೃತ್ತಿಗೂ, ಅವನ ಜೀವನ ವೃತ್ತಿಗೂ, ಹೊಂದಿಕೆಯಾಗಲಿಲ್ಲ. ಕಿತ್ತೂರಿನ ಪತನ, ಚೆನ್ನಮ್ಮ ರಾಣಿಯ ಮರಣ, ದೇಸಾಯಿಗಳ ದತ್ತುಪುತ್ರನ ದುರಂತ ಸ್ಥಿತಿ, ಇವೆಲ್ಲ ಕಿತ್ತೂರಿನ ಜನರ ಕರುಳನ್ನು ಕತ್ತರಿಸಿ, ನಿತ್ಯಯಾತನೆ ಕೊಡುತ್ತಿದ್ದವು. ಅವರ ಸ್ವಾತಂತ್ರ್ಯ ಪ್ರೇಮವೊಂದು ಕಡೆ, ಅವರ ನಿಸ್ಸಹಾಯತೆ, ನಿರಾಶೆಯೊಂದು ಕಡೆ, ಅವರನ್ನು ಅಶಾಂತರನ್ನಾಗಿ, ಅಸುಖಿಗಳನ್ನಾಗಿ ಮಾಡಿತ್ತು. ನಾಯಕನೊಬ್ಬ ಸಿಕ್ಕಿಯಾನೆ, ಮತ್ತೆ ನಮ್ಮ ಸ್ವಾತಂತ್ರ್ಯಾಪಹಾರಕರನ್ನು ನಾವು ಎದುರಿಸೇವೆ, ಎಂಬದಾಗಿ ಜನರು ತಹತಹ ಪಡುತ್ತಿದ್ದರು. ಸ್ವಗ್ರಾಮಕ್ಕೆ ಹಿಂತಿರುಗಿದ ರಾಯಣ್ಣ ತನ್ನ ಕಣ್ಣುಮುಂದೆಯೇ ನಾಶವಾದ ಕಿತ್ತೂರಿನ ವೈಭವದ ಸ್ಮರಣೆ ಮಾಡಿದ. ರಾಯಣ್ಣನೊಬ್ಬನೇ ಅಲ್ಲ, ಸಾಮಾನ್ಯವಾಗಿ ಕಿತ್ತೂರಿನ ಜನರೆಲ್ಲ ಕಂಪೆನಿಯ ವಿರುದ್ಧ ಕ್ರಾಂತಿ ಧ್ವಜವನ್ನೆತ್ತಿ ಹಿಡಿಯಲು ಒಳಗೊಳಗೇ ಕಾತುರರಾಗಿದ್ದರು.

ಸಹಜ ಸ್ವಾತಂತ್ರ್ಯ ಪ್ರೇಮಿ, ವೀರ, ರಾಯಣ್ಣ ತಲಾರಿಯಾಗಿ, ಗುಲಾಮರ ಕೀಳು ಸೇವಕನಾಗಿ, ಜೀವನ ನಡೆಸಲು ಸಾಧ್ಯವೆ? ತಲಾರಿಗೆ ಪ್ರತಿಕ್ಷಣದ, ಸ್ಥಳದೊಡೆಯ ಕುಲಕರಣಿ. ಸಂಗೊಳ್ಳಿಯ ಕುಲಕರಣಿ, ರಾಯಣ್ಣನಿಗೆ ಅಲ್ಲದ ಸಲ್ಲದ ಕೆಲಸಗಳನ್ನು ಹೇಳಿ, ಅವನ ಆತ್ಮಗೌರವಕ್ಕೆ ಸಂಚಕಾರ ತಂದ. ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು. ಸಿದ್ಧ ಹೃದಯದ ಜನರ

ಬೆಂಬಲ ತನಗುಂಟೆಂದು ಮನಸ್ಸಿನಲ್ಲಿ ಖಚಿತಮಾಡಿಕೊಂಡ. ಭಾವನಾಶಕ್ತಿ ಯುತನಾದ ರಾಯಣ್ಣ ರಾಣಿ ಚೆನ್ನಮ್ಮಾಜಿ ಆರಂಭಿಸಿದ ಸ್ವಾತಂತ್ರ್ಯ ಸಂಗ್ರಾಮ ವನ್ನು ಮುಂದುವರಿಸಬೇಕೆಂದು ನಿಶ್ಚಯಮಾಡಿದ. ದೇಸಾಯಿಗಳ ದತ್ತಕ ಬಿಕಾರಿಯಾಗಿದ್ದ. 'ಮಾಸ್ತ ಮರಡಿ ಗೌಡರ ಮಗನಿಗೆ ಕಿತ್ತೂರು ಸಂಸ್ಥಾನದ ಪಟ್ಟ ಕಟ್ಟಬೇಕು' ಎಂದು ನಿಶ್ಚಯಮಾಡಿದ. ಕಂಪೆನಿ ಸರಕಾರದ ಸಹಜ ವಿರೋಧಿಗಳಾಗಿದ್ದ ಜನರಿಗೆ 'ದತ್ತಕನ ಸಿಂಹಾಸನಾರೋಹಣ' ಯೋಜನೆಯು ಪ್ರಿಯವೆನಿಸಿತು. ರಾಯಣ್ಣ ನಿರಾಯಾಸವಾಗಿ ಕಿತ್ತೂರು ಜನರನ್ನು ಸೇರಿಸಿದ; ಅವರನ್ನು ಆಂಗ್ಲ ಸರಕಾರ ವಿರುದ್ಧ ಎತ್ತಿಕಟ್ಟಿದ. ಅಲ್ಪಕಾಲದಲ್ಲೇ ಸಣ್ಣ ಸೈನ್ಯ ರೂಪುಗೊಂಡಿತು. ಹಳ್ಳಿಯ ತಲಾರಿಯು ದಂಡನಾಯಕನಾದ. ಕಿತ್ತೂರು ನಾಡಿಗೆ ನಾಡೇ ರಾಯಣ್ಣನನ್ನು ನಾಡಿನ ನಾಯಕನನ್ನಾಗಿ ಅಂಗೀಕರಿಸಿತು.

ರಾಯಣ್ಣ ಮೊಟ್ಟಮೊದಲು ಬೀಡಿಯ ಮಾಮಲೆದಾರನ ಕಚೇರಿಯನ್ನು ಮುತ್ತಿದ; ಕಚೇರಿಯನ್ನು ಸುಟ್ಟು ಭಸ್ಮಮಾಡಿದ; ಕ್ರಾಂತಿಯ ಧ್ವಜ ಹಾರಿಸಿದ. ದಿನದಿನವೂ, ಕ್ಷಣಕ್ಷಣವೂ, ಜನರು ಕ್ರಾಂತಿಯ ಧ್ವಜದಡಿಯಲ್ಲಿ ಬಂದು ನಿಲ್ಲಲಾರಂಭಿಸಿದರು. ಸರಕಾರದ ಖಜಾನೆಗಳ ಲೂಟಿಗಾರಂಭವಾಯಿತು. ಕ್ರಾಂತಿ ಜ್ವಾಲೆ ನಾಡಿನಲ್ಲೆಲ್ಲ ಹರಡಿತು. ಸಂಸ್ಥಾನದ ಯಾವ ಮೂಲೆಯಲ್ಲಿ, ಯಾವ ಊರಲ್ಲಿ, ಯಾವ ಮನೆಯಲ್ಲಿ, ಕಿವಿಗೊಟ್ಟು ಕೇಳಲಿ ಸ್ವಾತಂತ್ರ್ಯ ವೀರ ಸಂಗೊಳ್ಳಿ ರಾಯಣ್ಣನ ಹೆಸರೇ. ಸಾವಿರಗಟ್ಟಲೆ ಜನ ಅವನನ್ನು ಹಿಂಬಾಲಿಸಿದರು. ಆಂಗ್ಲರ ಬಲದ ರಹಸ್ಯವನ್ನರಿತ ರಾಯಣ್ಣ, ಬಾಳಗುಂದ, ಹಂಡಿಬಡಗನಾಥ ಗುಡ್ಡಗಾಡುಗಳಲ್ಲಿ ಅಡಗಿಕೊಂಡು, ಕಂಪೆನಿ ಸರಕಾರದವರನ್ನು ನಿತ್ಯ ಭಯ ದಲ್ಲಿಟ್ಟ. ಕಗ್ಗೊಲೆಯ ಕಾಳಗ (ಗರಿಲ್ಲಾ ವಾರ್‌ಫೇರ್) ಕುಶೀಲವನಾದ ರಾಯಣ್ಣನನ್ನು ಅಪಾರ ಸೈನ್ಯಬಲದ ಬ್ರಿಟಿಷರು ಎದುರಿಸಲಾಗಲಿಲ್ಲ. ರಾಯಣ್ಣನ ಸಮರತಂತ್ರ ಕಂಡು ಬ್ರಿಟಿಷರು ಬೆಚ್ಚಿಬಿದ್ದರು.

ಕಿತ್ತೂರು ಚೆನ್ನಮ್ಮಾಜಿಯನ್ನೂ, ಶಿವಲಿಂಗರುದ್ರ ಸರ್ಜನ ಪತ್ನಿ ಈರವ್ವ ನನ್ನೂ, ಬ್ರಿಟಿಷರು ಬೈಲಹೊಂಗಲದಲ್ಲಿ ಬಂಧಿಸಿದ್ದರಷ್ಟೆ. ಈರವ್ವನ ಸಹಾಯ ರಾಯಣ್ಣನ ಬಂಡಾಯಕ್ಕೆ ಇರಬೇಕೆಂದು ಊಹಿಸಿ, ಆಳರಸರು ಆಕೆಯನ್ನು ಬೈಲಹೊಂಗಲದಿಂದ ಕದಲಿಸಿ, ಕುಸುಗಲ್ ಕೋಟೆಯಲ್ಲಿಟ್ಟರು. ಆಂಗ್ಲರು ಹೀಗೆ ಮಾಡಿದ್ದು ರಾಯಣ್ಣನಿಗೆ ಹೆಚ್ಚು ಅನುಕೂಲವೇ ಆಯಿತು. ಈರವ್ವನನ್ನು ಬೈಲಹೊಂಗಲದಿಂದ ಹೊರಡಿಸಿದರೆಂಬ ಸುದ್ದಿ ನಾಡಿನಲ್ಲೆಲ್ಲ ಕಾಡುಕಿಚ್ಚಿನಂತೆ ಹರಡಿತು. ಜನರಲ್ಲಿ ಕೋಲಾಹಲವನ್ನುಂಟುಮಾಡಿತು; ಅಶಾಂತಿ, ಅತೃಪ್ತಿ, ವೈರಭಾವ, ನೂರ್ಮಡಿಯಾಯಿತು. ಬೈಲಹೊಂಗಲದ ಸಮೀಪದ ಆನಿಗೊಳ ದಲ್ಲೇ ಒಂದು ಸಾವಿರ ಜನರು ಶಸ್ತ್ರಪಾಣಿಗಳಾಗಿ ಎದ್ದರು; ಕಂಪೆನಿ ಸರಕಾರ ವಿರುದ್ಧವಾಗಿ ನಿಂತರು. ರಾಯಣ್ಣನ ಸೈನ್ಯಬಲ ಬೆಳೆಯಿತು. ಕಗ್ಗೊಲೆಯ ಕಾಳಗದ ವಿಧಾನದ ಮುಂದೆ ಬ್ರಿಟಿಷ್ ಸೈನ್ಯಗಳ ಆಟ ಸಾಗಲಿಲ್ಲ; ಆಂಗ್ಲರ ಶೌರ್ಯ, ಸಾಹಸ, ತಂತ್ರಗಳೆಲ್ಲ ಮಣ್ಣುಗೂಡಿದುವು.

ಆಂಗ್ಲರಿಗೆ ಉಳಿದದ್ದು ಕ್ಲೈವನು ಹಾಕಿಕೊಟ್ಟ ಕುಟಿಲಮಾರ್ಗವೊಂದೇ. ಅವನು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪಿಸಿದ್ದು ಈ ಮಾರ್ಗದಿಂದಲೇ.

"ಕ್ಲೈವನೊಬ್ಬ ದರೋಡೆಕೋರನಾಗಿ ಯಶಸ್ಸಂಪಾದನೆ ಮಾಡಿದ. ತಾನೇ ಒಪ್ಪಿಕೊಂಡಿರುವಂತೆ ಕಳ್ಳ ರುಜು ಮಾಡು ವುದರಲ್ಲಿ ಖದೀಮ; ಅಸತ್ಯವಾದಿ, ಮೋಸಗಾರ. ಅವನ ಕಾಲದ ಸೇನಾನಾಯಕರೊಂದಿಗೇ ಹೋಲಿಸಿ ನೋಡಿದಾಗ ಅವನ ಸಾಂಗ್ರಾ ಮಿಕ ಸಾಧನೆಗಳಾದರೂ ಹಾಸ್ಯಾಸ್ಪದವಾದುವು. ಅವನೊಂದು ಸಂಸ್ಥಾನ ಸ್ಥಾಪಿಸಿದ; ಅದನ್ನು ಏಳು ವರ್ಷಗಳ ಕಾಲ ಆಳಿದ. 'ಕಳ್ಳಕಾಕರ ಸಂಸ್ಥಾನ'ವೆಂಬ ಹೆಸರಿಗೆ ಮಾತ್ರ ಅದು ಯೋಗ್ಯ. ಆಡಳಿತಕ್ಕಾಗಿ ಆಕ್ರಮಿಸಿದ ರಾಜ್ಯದಲ್ಲಿ ಸಾಧ್ಯವಾದಷ್ಟು ಸುಲಿಗೆ ಮಾಡುವುದು ಪರಮೋದ್ದಿಶ್ಯವಾಯಿತು. ೧೭೫೭ ರಿಂದ ೧೭೭೪ರ ವರೆಗಿನ ಕಾಲದ ವಿದ್ಯಮಾನಗಳ ಮೇಲೆ ಆಂಗ್ಲ ಇತಿಹಾಸಕಾರರು ಪರದೆಯನ್ನೆಳೆಯಲಪೇಕ್ಷಿಸುತ್ತಾರೆ. ಭಾರತದ ದೀರ್ಘೇತಿಹಾಸದ ಯಾವ ಕಾಲದಲ್ಲೂ, ತೋರಮಾನ, ಮೊಹಮ್ಮದ್ ತೊಗಲಖರ ರಾಜ್ಯಭಾರ ಕಾಲದಲ್ಲೂ ಸಹ ಯಾವ ಪ್ರಾಂತದಲ್ಲೂ ಪ್ರಜೆಗಳು ಕ್ಲೈವನ ಕಾಲದಲ್ಲಿ ಬಂಗಾಳದ ಜನರನುಭವಿಸಿದ ದುಃಖ ದುರಂತ ವನ್ನು ಮೀರಿ ಅನುಭವಿಸಲಿಲ್ಲ." [9]

ನೇರವಾಗಿ ರಣಭೂಮಿ ಪ್ರವೇಶಮಾಡಿ, ರಾಯಣ್ಣನನ್ನು ವಶಪಡಿಸಿಕೊಳ್ಳಲಾಗ ದೆಂದು ಬ್ರಿಟಿಷರು ಹೇಗಾದರೂ ಮಾಡಿ ಅವನನ್ನು ಕೈಸೆರೆ ಹಿಡಿಯುವ ಹಂಚಿಕೆ ಹೂಡಿದರು. ಭರತಖಂಡವು ಆ ಕಾಲದಲ್ಲಿ ವೀರ ಪುರುಷರಿಗೆ ಹೇಗೆ ಮೂಲಸ್ಥಾನ ವೆನಿಸಿತ್ತೋ ಹಾಗೆಯೇ ಸ್ವಾಮಿದ್ರೋಹಿಗಳಿಗೂ, ದೇಶದ್ರೋಹಿಗಳಿಗೂ, ಮಾತೃ ಸ್ಥಾನ ವೆನಿಸಿತ್ತು. ಶಿವಲಿಂಗ ರುದ್ರ ಸರ್ಜನಿಗೆ ತನ್ನ ಮಗನನ್ನು ದತ್ತು ಕೊಡುವ ಇಚ್ಛೆಯನ್ನು ಖುದಾನಪುರದ ಪಟೇಲ ಲಿಂಗನಗೌಡ ವ್ಯಕ್ತಪಡಿಸಿದ್ದನಂತೆ. ಕಾರಣಾಂತರಗಳಿಂದ ಲಿಂಗನಗೌಡನ ಆಶೆ ಪೂರೈಸಲಿಲ್ಲ. ಅವನಿಗೆ ದೇಸಾಯಿಗಳ ಮೇಲೆ ಕ್ರೋಧವಿತ್ತು. ಈ ವಿಷಯ ಸರಕಾರಕ್ಕೆ ಗೊತ್ತಿತ್ತು. ಲಿಂಗನ ಗೌಡನನ್ನು ಕೈಗೊಂಬೆ ಮಾಡಿಕೊಂಡು, ರಾಯ ನಾಯಕನನ್ನು ಮೋಸಗೊಳಿಸಿ, ಅವನನ್ನು ವಶಪಡಿಸಿಕೊಳ್ಳಬೇಕೆಂದು ಸಂಪಗಾವಿಯ ಮಾಮಲೆದಾರ ಕೃಷ್ಣರಾಯ ಸಂಚು ನಡೆಸಿದ.

---

[9] "Clive was a gangster who had achieved glory, a confessed forger, lier and cheat, whose military achievements compared to those of the generals of the time were wholly ridiculous. The state he founded and administered for seven years was nothing more than a robber state, the one object of which was to extract as much as possible from the territories it was supposed to administer. English historians prefer to draw a veil over the period between 1757 and 1774 but it has to be emphasised that at no period in the long history of India including the reigns of Toramana and Mohammad Tughluq did the people of any province suffer so great a misery as the people of Bengal did in the era of Clive."

—*A Survey of Indian History, K. M. Panikkar, p.* 195-196.

ಲಿಂಗನಗೌಡನಿಗೆ ನಾನಾ ಆಸೆಗಳನ್ನು ತೋರಿಸಲಾಯಿತು. ಲಿಂಗನ ಗೌಡನಿಗೆ ಆಸೆ ಅಪಾರವಾಗಿತ್ತಾದರೂ, ಸಾಕಾದಷ್ಟು ಧೈರ್ಯವಿರಲಿಲ್ಲ. ಮಾಮಲೆದಾರ ಕೃಷ್ಣರಾಯ, ನೇಗಿನಹಾಳದ ವೆಂಕನ ಗೌಡನೆಂಬವನನ್ನು ಲಿಂಗನ ಗೌಡನಿಗೆ ಜತೆಮಾಡಿದ. ಇವರಿಬ್ಬರೂ ಕೆಲವು ಸೈನಿಕರನ್ನು ಕಟ್ಟಿಕೊಂಡು ರಾಯಣ್ಣನ ಬಳಿಗೆ ಹೋಗತಕ್ಕದೆಂದೂ, ತಾವೂ ರಾಯಣ್ಣನ ಮಹತ್ಕಾರ್ಯ ಸಾಧನೆಗೆ ನೆರವಾಗಲು ಬಂದವರಂತೆ ಕೆಲಕಾಲ ನಟನೆ ಮಾಡತಕ್ಕದ್ದೆಂದೂ, ಅನಂತರ ಸಮಯ ನೋಡಿ, ಅವನನ್ನು ಹಿಡಿಯತಕ್ಕದ್ದೆಂದೂ, ನಿಶ್ಚಯವಾಯಿತು. ಲಿಂಗನ ಗೌಡ, ವೆಂಕನ ಗೌಡರಿಬ್ಬರೂ ತಮ್ಮ ಜನರೊಂದಿಗೆ ಹೋಗಿ, ರಾಯಣ್ಣನನ್ನು ಸೇರಿದರು; ಅವನ ಪರಮ ಭಕ್ತರಂತೆ, ಆಪ್ತರಂತೆ ವರ್ತಿಸಿ, ನಂಬಿಕೆ ಹುಟ್ಟಿಸಿದರು. ಒಂದು ದಿನ ರಾಯ ನಾಯಕ ಮಲಪ್ರಭಾ ನದಿಗೆ ಹೋಗಿ ಸ್ನಾನ ಮಾಡಬಯಸಿ, ಬಟ್ಟೆಬರೆ, ಶಸ್ತ್ರ ಅಸ್ತ್ರಗಳನ್ನು ತೆಗೆದಿಟ್ಟು, ಹೊಳೆಗಿಳಿದ. ಆಗ ಲಿಂಗನ ಗೌಡನ ಕಡೆಯವರು ಬಂದರು. ರಾಯ ನಾಯಕನನ್ನು ಹಿಡಿದು, ಅವನ ಕೈಕಾಲುಗಳನ್ನು ಕಟ್ಟಿ, ಧಾರವಾಡಕ್ಕವನನ್ನು ಎಳೆದೊಯ್ದು, ಆಂಗ್ಲ ವೈರಿಗಳ ವಶಮಾಡಿದರು. ಆಂಗ್ಲರಿಗಾದ ಸಂತೋಷಕ್ಕೆ ಪಾರವೇ ಇಲ್ಲ. ಲಿಂಗನ ಗೌಡನು ತಮಗೆ ಮಾಡಿದ ಸಹಾಯಕ್ಕಾಗಿ ಅವನಿಗೆ ಕಲ್ಲೋಳಿ ಗ್ರಾಮವನ್ನೂ, ವೆಂಕನ ಗೌಡನು ಮಾಡಿದ ಸಹಾಯಕ್ಕಾಗಿ ಅವನಿಗೆ ಧಾರವಾಡ ತಾಲ್ಲೂಕಿನ ಧೋರಿ ಗ್ರಾಮವನ್ನೂ, ಬಹುಮಾನವಾಗಿ ಕೊಟ್ಟು, ವಂಶಪಾರಂಪರ್ಯವಾಗಿ, ಆಚಂದ್ರಾರ್ಕ ಸ್ಥಾಯಿಯಾಗಿ, ಅನುಭವಿಸಿಕೊಂಡು ಬನ್ನಿರೆಂದು ಅವರು ಅನುಗ್ರಹಮಾಡಿದರು.

ಸೆರೆಯಾಳಾದ ರಾಯ ನಾಯಕನನ್ನು ವಿಚಾರಣೆಗೆ ಗುರಿಪಡಿಸಿ, ಆಂಗ್ಲ ಅಧಿಕಾರಿಗಳು ಅವನಿಗೆ ಮರಣದಂಡನೆಯನ್ನು ವಿಧಿಸಿದರು. ನಂದಗಡದಲ್ಲಿ ಅವನನ್ನು ಗಲ್ಲಿಗೇರಿಸತಕ್ಕದ್ದೆಂದು ತೀರ್ಮಾನ ಮಾಡಿದರು. ನಂದಗಡದಿಂದ ರಾಯಣ್ಣನನ್ನು ವಧ್ಯಸ್ಥಾನಕ್ಕೊಯ್ಯುವಾಗ 'ನನ್ನ ದೇಹ ಬಿದ್ದಮೇಲೆ ಅದನ್ನು ಇಂತಹ ಸ್ಥಳದಲ್ಲಿ ಹೂಳಿ; ಕಾಲಾನುಕಾಲಕ್ಕಲ್ಲಿ ಒಂದು ದೊಡ್ಡ ವೃಕ್ಷ ಬೆಳೆಯುತ್ತದೆ' ಎಂಬರ್ಥ ಬರುವಂತೆ ಹೇಳಿ, ಸಂತೋಷ ಸಮಾಧಾನದ ನಗೆಮೊಗದಿಂದ, ಮರಣವನ್ನಪ್ಪಿದ. ರಾಯಣ್ಣನ ವೀರವಸ್ತುವನ್ನು ಅವನಿಚ್ಛೆಯಂತೆ ಸಮಾಧಿ ಮಾಡಿದರು. ಅದರ ಮೇಲೆ ಈಗಲೂ ದೊಡ್ಡ ಆಲದ ಮರವೊಂದು ಬೆಳೆದಿದೆ. ಆ ಮರದಡಿಯಲ್ಲಿ ಜನರು ಒಂದು ಗುಡಿಯನ್ನು ಕಟ್ಟಿಸಿದ್ದಾರೆ. ಗಂಡಸರು, ಹೆಂಗಸರು, ಮಕ್ಕಳು, ಸಹಸ್ರಾರು ಜನರು ಈ ವೀರ ಗುಡಿಯಾತ್ರೆ ಮಾಡುತ್ತಾರೆ. ರಾಯಣ್ಣನ ಹರಕೆ ಹೊತ್ತು ಬಂದು, ತಮ್ಮ ಭಕ್ತಿ, ಗೌರವದ ಕಾಣಿಕೆಯನ್ನರ್ಪಿಸಿ ಹೋಗುತ್ತಾರೆ. ಸಂಗೊಳ್ಳಿಯಲ್ಲಿ ರಾಯನಾಯಕನ ಕಲ್ಲಿನ ಮೂರ್ತಿಯೊಂದು ಇದೆ.

> "ರಾಣಿ ಚೆನ್ನಮ್ಮಾಜಿಯಂತೆಯೇ ಸಂಗೊಳ್ಳಿ ರಾಯಣ್ಣನ ಹೆಸರು ಸಹ ಹಾಡುಗಳ ಮೂಲಕ, ಲಾವಣಿಗಳ ಮೂಲಕ ಕನ್ನಡ ಜನರ ನೆನಪಿನಲ್ಲಿ ನವನವವಾಗಿದೆ. ಹಳ್ಳಿಯ ಜನರ ನಾಲಿಗೆಗಳಲ್ಲಿವು ಇಂದೂ ನುಡಿಯುತ್ತಿವೆ. ರಾಯಣ್ಣನ ವೀರ ಕಥೆಗಳೂ, ಪರಾಕ್ರಮ ಸಾಹಸಗಳೂ, ಯುಕ್ತಿಯುತವಾದ ಸಂಗ್ರಾಮ ವ್ಯೂಹರಚನೆಗಳೂ, ಚಲನಗಳೂ, ಇವೆಲ್ಲಕ್ಕಿಂತಧಿಕವಾಗಿ ಕಿತ್ತೂರಿನ ಸ್ವಾತಂತ್ರ್ಯ

ಸಾಧನೆಗಾಗಿ ಅವನು ನಿರಂತರವಾಗಿ ಮಾಡಿದ ಕೆಲಸ, ಪಟ್ಟಪಾಡು— ಇವುಗಳನ್ನೆಲ್ಲ ಕೇಳಿದಾಗ ಜನರ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯುತ್ತದೆ. ಅವರಲ್ಲಿ ದೇಶಭಕ್ತಿಯ ಕಡೆಗೆ ಸ್ಫೂರ್ತಿಯುಂಟಾಗುತ್ತದೆ." 10

ಕಿತ್ತೂರು ಸ್ವಾತಂತ್ರ್ಯ ಸಂಗ್ರಾಮೇತಿಹಾಸದಲ್ಲಿ ಚೆನ್ನಮ್ಮ ರಾಣಿಯ ಪ್ರಯತ್ನ ಮೊದಲನೆಯ ಘಟ್ಟ. ಸಂಗೊಳ್ಳಿ ರಾಯಣ್ಣನ ಪ್ರಯತ್ನ ಎರಡನೆಯ ಘಟ್ಟ. ಇವೆರಡು ಪ್ರಯತ್ನಗಳೂ ದುರಂತದಲ್ಲೇ ಮುಕ್ತಾಯವಾದುವು. ಆದರೆ ಚೆನ್ನಮ್ಮ, ರಾಯಣ್ಣ ಇವರ ಸ್ವಾತಂತ್ರ್ಯ ಪ್ರೇಮ, ಸಾಹಸ, ತ್ಯಾಗ, ಸ್ವಾತಂತ್ರ್ಯದ ಹೋರಾಟವನ್ನು ಜನರಲ್ಲಿ ಜೀವಂತವಾಗಿಟ್ಟವು. ಸರದಾರ ಗುರುಸಿದ್ದಪ್ಪ ಮೊದಲಾದವರನೇಕರು ಸ್ವಾತಂತ್ರ್ಯ ಸಾಧನೆಯ ಕೆಲಸವನ್ನು ಮುಂದುವರಿಸಿದರು. ಎಂತಹ ಕಷ್ಟವೇ ಬರಲಿ, ಎಂತಹ ನಷ್ಟವೇ ಆಗಲಿ, ಕಿತ್ತೂರಿನ ಸ್ವಾತಂತ್ರ್ಯವನ್ನು ಸಾಧಿಸಬೇಕು; ದೇಸಾಯಿಗಳ ಮನೆತನದ ಪುನರುದ್ಧಾರಮಾಡಬೇಕು— ಹೀಗೆ ಸಂಕಲ್ಪಮಾಡಿದರು. ಕಿತ್ತೂರು ಪ್ರಜೆಗಳೆಲ್ಲರ ಆಶಯವಾದರೂ ಇದೇ ಆಗಿದ್ದಿತು. ಜನನಾಯಕರು ಮಾತ್ರವಲ್ಲ ಜನ ಸಾಮಾನ್ಯರೂ ಸಹ ಈ ಬಗೆಯ ಮನೋಧರ್ಮವನ್ನೂ, ದೃಢಸಂಕಲ್ಪವನ್ನೂ, ತೋರಿಸುತ್ತಿರುವರಲ್ಲಾ ಯೆಂದು ಆಡಳಿತ ಸಮರ್ಥರೂ, ಪಶುಬಲ ಪ್ರಯೋಗ ವಿಶ್ವಾಸಿಗಳೂ, ಆದ ಬ್ರಿಟಿಷರು ದಬ್ಬಾಳಿಕೆಗಾರಂಭಿಸಿದರು. ಮಾಸ್ತಿಮರಡಿ ಗೌಡರ ಮಗ, ದೇಸಾಯಿಗಳ ದತ್ತಕನನ್ನು ಹಿಡಿದರು; ದೊಡ್ಡವಾಡ ಕೋಟೆಯಲ್ಲಿ ಅವನನ್ನು ಬಂಧಿಸಿದರು. ಇದರಿಂದ ಜನರ ಅತೃಪ್ತಿ, ಅಸಮಾಧಾನ ಹೆಚ್ಚಿತಲ್ಲದೆ ಅವರ ರೋಷಾಗ್ನಿಯನ್ನೂ ಕೆರಳಿಸಿದಂತಾಯಿತು. ೧೮೩೩ರಲ್ಲಿ ಶಂಕ್ರಣ್ಣನೆಂಬಾತ ನಾಯಕನಾದ; ಬಂಡಾಯ ಹೂಡಿದ. ಆದರೆ ಆಂಗ್ಲ ಆಡಳಿತಗಾರರು ಮೊದಮೊದಲಲ್ಲೇ ಉಗ್ರಕಾರ್ಯಕ್ರಮಗಳನ್ನು ಕೈಕೊಂಡು, ಶಂಕ್ರಣ್ಣನ ಬಂಡಾಯ ಹರಡದಂತೆ ಮಾಡಿಬಿಟ್ಟರು.

೧೮೩೬ರಲ್ಲಿ ಕಿತ್ತೂರು ಸ್ವಾತಂತ್ರ್ಯ ಪಕ್ಷಪಾತಿಗಳಾದ ನಾರಪ್ಪ ಗಜ ಪುಟ್ಟಿ, ಸವಾಯಿ ಶೆಟ್ಟಿ, ಕಟ್ಗಿ ರುದ್ರಪ್ಪ, ಷೇಕ್ ಸುಲೇಮಾನ್, ಭೀಮಣ್ಣ ಬುರುಸ್ ಮುಂತಾದವರು ಸೇರಿದರು. ಬಂಡಾಯದ ಪ್ರಯತ್ನಮಾಡಿದರು. ತಮ್ಮ ಕಾರ್ಯ ಯಶಸ್ವಿಯಾಗಬೇಕೆಂದು ಗೋವೆಯ ಸರಕಾರದಿಂದ ಶಸ್ತ್ರಾಸ್ತ್ರಗಳನ್ನು ಪಡೆಯಲು, ಕಂಪನಿ ಸರಕಾರವನ್ನುರುಳಿಸಲು, ಪ್ರಯತ್ನಮಾಡಿದರು. ಗೋವೆಯ ದಂಡನಾಯಕ ಎರ್ಕೊಲಿನ್ ಸಹಾಯಕೊಡಲು ಮುಂದೆಬಂದ. ದೊಡ್ಡವಾಡ ಕೋಟೆಯಲ್ಲಿ

---

10 "Just like Rani Chennamma, the heroine, Sangolli Rayanna also lives evergreen in the memory of the Kannada people through songs and *lavanees* sung by the villagers even today. The story of his brave deeds, heroic exploits, skilful moves and manoeuvres and above all his relentless efforts in the noble cause of Kittur's freedom sends the people into tears and inspires patriotic feelings in them."

*F.M.C. Bombay.*

ಬಂದಿಯಾಗಿದ್ದ ದೇಸಾಯಿಗಳ ದತ್ತಕ ಈ ಸಂಚಿಗೆ ಒತ್ತಾಸೆ ನೀಡಿದ. ಮೈಯೆಲ್ಲ ಕಣ್ಣಾದ ಕಂಪನಿ ಸರಕಾರಕ್ಕೆ ಈ ಪಿತೂರಿ ಹೇಗೋ ಗೊತ್ತಾಯಿತು. ಪಿತೂರಿಗಾರರನ್ನೆಲ್ಲ ಹಿಡಿದು ಶಿಕ್ಷಿಸಿದರು. ಈ ಪ್ರಯತ್ನವೂ ವಿಫಲವಾಯಿತು.

೧೮೩೭-೩೮ ರಲ್ಲೂ ಅನೇಕ ಸಂಚುಗಳು ನಡೆದುವು. ಸಂಗೊಳ್ಳಿ ರಾಯಣ್ಣನ ಬಂಧನಕ್ಕೆ ಖುದನಾಪುರದ ಲಿಂಗೇ ಗೌಡನಲ್ಲವೆ ಕಾರಣ. ಕಿತ್ತೂರು ಪಕ್ಷದವರು ಈ ದೇಶದ್ರೋಹಿಗೆ ವಿಷಹಾಕಿ ೧೮೩೮ ರಲ್ಲಿ ಕೊಂದು ಹಾಕಿದರು. ಪ್ರಚಂಡ ಬಂಡಾಯ ಆರಂಭವಾಗಬೇಕು. ಅಷ್ಟರಲ್ಲೇ ಆಂಗ್ಲ ಅಧಿಕಾರಿಗಳು ಯಾರ ಯಾರ ಮೇಲೆ ತಮಗೆ ಸಂಶಯವಿತ್ತೋ ಅಂತಹ ನಾಯಕರನ್ನೆಲ್ಲ ಹಿಡಿದು, ಅವರಿಗೆಲ್ಲ ಮರಣ ದಂಡನೆಯನ್ನು ವಿಧಿಸಿದರು.

ಮಂಡಲಿ ಹೆಬ್ಬಳ್ಳಿಯ ಬಸವ ಕವಿಯು ರಾಯ ನಾಯಕನ ಕಾಲದಲ್ಲಿದ್ದವ. ಸಂಗೊಳ್ಳಿ ರಾಯಣ್ಣನ ಬಂಡಾಯ, ದುರಂತ, ಮುಕ್ತಾಯಗಳನ್ನು ಕಣ್ಣಾರ ಕಂಡವ. ಅವನೊಂದು ಲಾವಣಿಯನ್ನು ಬರೆದಿದ್ದಾನೆ. ದೇಶದ್ರೋಹಿಗಳು ಮೂವರು ರಾಯಣ್ಣನನ್ನು ಮೋಸದಿಂದ ಹಿಡಿದು, ಆಂಗ್ಲ ಅಧಿಕಾರಿಗಳಿಗೊಪ್ಪಿಸಿದ ಪ್ರಕರಣದ ವರ್ಣನೆಯು ಚಿತ್ತಾಕರ್ಷಕವಾಗಿದೆ.

ಗದ್ಯ ಚಿತ್ರವಿದು :—

ಘನ ಗಂಭೀರ ಸಂಗೊಳ್ಳಿ ರಾಯಣ್ಣ ಸಂಪಗಾವ ಸುಭೇದಾರಿಯ ಮುತ್ತಿಗೆ ಕೊಳ್ಳೆ ಮಾಡಿದ್ದಾನೆ. ಸುತ್ತ ಮುತ್ತಣ ಹಳ್ಳಿಗಳನ್ನೆಲ್ಲ ಅವನ ಸಂಗಡಿಗರು ಧ್ವಂಸಮಾಡುತ್ತಿದ್ದಾರೆ.

ಸಂಗೊಳ್ಳಿಯ ಕುಲಕರಣಿ ಪದವಿ ಪ್ರತಿಷ್ಠೆಯಿಂದ ಬೀಗಿ ಮೆರೆಯುತ್ತಿದ್ದಾನೆ. ರಾಯಣ್ಣನಾದರೋ ಕುಲಕರಣಿಯ ಆಪ್ತ, ಗೆಳೆಯ. ಆದರೇನು ಅವರಿಬ್ಬರ ನಡುವೆ ಭಯಂಕರ ಕಲಹ ತಲೆಹಾಕಿತು; ವೈರ ಬೆಳೆಯಿತು. ಒಂದು ದಿನ ಬಾಲಪ್ಪ ಕುಲಕರಣಿ, ಸಂಗೊಳ್ಳಿ ರಾಯಣ್ಣ ಸ್ನಾನಕ್ಕೆ ಹೊರಟರು. ಬಾಲಪ್ಪನು 'ನನ್ನ ಧೋತ್ರವನ್ನು ಒಗೆ' ಯೆಂದು ರಾಯಣ್ಣನಿಗೆ ಹೇಳಿದ. 'ನಿನ್ನ ಬಟ್ಟೆ ನಾ ಮುಟ್ಟುವುದಿಲ್ಲ' ಅಂದ ರಾಯಣ್ಣ. ಹಾಗಾದರೆ 'ಇದಕ್ಕೆ ತಕ್ಕ ಪ್ರತಿಫಲವನ್ನು ನೀನುಣುವೆ' ಅಂದ ಬಾಲಪ್ಪ.

ರಾಯನಾಯಕ ಸುರಪುರಕ್ಕೆ ಹೊರಟ. ಸುರಪುರ ನಾಯಕನೆದುರಿಗೆ ತನ್ನ ಪರಾಕ್ರಮ ತೋರಿಸಿದ. ಈ ವೀರನ ಸಾಹಸ ಕಂಡು ಮೆಚ್ಚಿದ, ಸಂತೋಷದಿಂದ 'ನೀನೇನು ಬೇಕಾದರೂ ಕೇಳು, ಕೊಡುತ್ತೇನೆ' ಅಂದ ಸುರಪುರದ ನಾಯಕ. 'ನನಗೆ ಮೂರು ನೂರು ಬೇಡರು ಪಟುಭಟರು ಬೇಕು. ಆ ಭಟರನ್ನು ನಾನೇ ಆರಿಸಬೇಕು. ಆ ಪಡೆಯನ್ನೊಯ್ದು ದಂಗೆಯನ್ನೆಬ್ಬಿಸುತ್ತೇನೆ' ಎಂದು ಹೇಳಿದ ರಾಯಣ್ಣ.

ರಾಯ ನಾಯಕ ಬೇಡರ ಪಡೆಯನ್ನು ತನ್ನೂರಿಗೊಯ್ದ. 'ವೀರರೆ! ಎಚ್ಚರಿಕೆಯಿಂದಿರಿ' ಎಂದವರಿಗೆ ಹೇಳಿದ. ಯೋಧರೆಲ್ಲ ಕತ್ತಿಕಠಾರಿಗಳನ್ನು, ಪಿಸ್ತೂಲು ಚಕ್ರಾಯುಧಗಳನ್ನು, ಬಿಲ್ಲು ಬಾಣಗಳನ್ನು, ಭಲ್ಯಗಳನ್ನು, ಹಿಡಿದು ಹೊರಟರು.

ಮುಂದಿನ ಸಾಲಿನಲ್ಲಿ ರಾಯಣ್ಣ ಕಾಲಾಳುಗಳನ್ನು ಬಿಟ್ಟ. ಕೊಂಬು, ಕಹಳೆ, ರಣಭೇರಿಗಳನ್ನು ಹಿಡಿದು ಸಾಗಿತು ಪದಾತಿ. ಬಂತೀ ಸೈನ್ಯ ಸಂಸಗಡಕ್ಕೆ. ದಾರಿಯಲ್ಲಿ ಸೈನಿಕರು—

"ಸತ್ಯುಳ್ಳ ಸಿರಸಂಗಿ ಕಲ್ಲವ್ವ! ಕಕ್ಕೇರಿ ಕರಿಯವ್ವ!
ನಮ್ಮನ್ನು ಹರಸವ್ವ! ಜಯವ ನೀಡವ್ವ!"

ಹೀಗೆ ಪ್ರಾರ್ಥನೆಮಾಡಿದರು. ಮುಂದುವರಿದ ಸೈನ್ಯ ಗಡವನ್ನು ಮುತ್ತಿತು; ಗಡ ಪ್ರವೇಶಮಾಡಿತು. ಎದುರಿಸಿದವರನ್ನೆಲ್ಲ ಕಡಿದುರುಳಿಸಿತು. ಸಂಸಗಡದಲ್ಲಿ ಜೀವಂತ ಪಿಳ್ಳೆಯೊಂದಿಲ್ಲ. ಸುದ್ದಿಕೇಳಿದ ಸುಭೇದಾರ, ಅಂಜಿದ; ಗಡಕ್ಕೆ ಓಡಿದ; ನೋಡಿದ ಸರ್ವನಾಶ. ಕೂಡಲೇ ಕಳುಹಿಸಿದ ಸುದ್ದಿ ಧಾರವಾಡಕ್ಕೆ.

ಸುದ್ದಿಕೇಳಿದ ಧಾರವಾಡದ ಕಲೆಕ್ಟರ ಸಿಟ್ಟಿಗೆದ್ದ; ಕುಣಿ ಕುಣಿದಾಡಿದ. ಬಂದ ಪತ್ರವನ್ನೋದಿದ; ಸಾಹೆಬ ವಿಚಾರಮಾಡಿದ; ನಡೆದು ಹೋದ ವಿಚಾರ ಕಟ್ಟಿಕೊಂಡೇನು ಅಂದ. ಕೂಡಲೆ ಕೂತ ಕುರ್ಚಿಯಿಂದೆದ್ದ; ಟೊಪ್ಪಿಗೆಯನ್ನು ತೆಗೆದೊಗೆದ; ಕೈ ಕೈಹೊಡೆದ; ಕೋಪೋದ್ರಿಕ್ತನಾಗಿ, ಕಟಕಟನೆ ಹಲ್ಲುಗಳನ್ನು ಕಡಿದ. ಅನಂತರ ಕೂತು, ಮುಂಬಯಿಗೊಂದು ಪತ್ರ ಬರೆದ.

ವಿಕ್ಟೋರಿಯ ಮಹಾರಾಣಿಯೇ ಪತ್ರವನ್ನೋದಿದಳು. ಕೂಡಲೆ ೫೦೦ ಬಿಳಿ ಸೈನಿಕರನ್ನೂ, ೨೦೦ ಕರಿಯ ಸಿಪಾಯಿಗಳನ್ನೂ ಕಳುಹಿಸಿದಳು.

ಈ ಸೈನ್ಯ ಸಹಾಯದಿಂದ ಸುಭೇದಾರ ರಾಯ ನಾಯಕನ, ಅವನ ಅನುಯಾಯಿಗಳ ಬೆನ್ನುಹತ್ತಿದ. ಅವರನ್ನು ಹುಡುಕಲಾರಂಭಿಸಿದ. ಬೆಟ್ಟ ಗುಡ್ಡ, ಕೆರೆ ಕಾಲುವೆ, ನದಿ, ಕಣಿವೆ, ಕಾಡುಮೇಡು, ಎಲ್ಲೆಲ್ಲೂ ಹಾರಾಡಿದ; ಹುಡುಕಾಡಿದ. ಹತಾಶನಾಗಿ ಕಡೆಗೆ ಹಲಿಯಾಳಕ್ಕೆ ಬಂದ. ಅವಿತು ಕೊಂಡಿದ್ದ ಕಡೆಯಿಂದ ರಾಯ ನಾಯಕ ಬರುತ್ತಿರುವ ಶತ್ರು ಸೈನ್ಯ ಕಂಡ. ಆಗ ತಾನೆ ರಾಯ ನಾಯಕನ ಸೈನಿಕರು ಊಟಮುಗಿಸಿದ್ದರು. ತಕ್ಷಣ ಸೈನಿಕರು ಶಸ್ತ್ರಪಾಣಿಗಳಾದರು; ಕೋವಿಗಳನ್ನು ಮರಗಳಿಗಾನಿಸಿದರು. ಮುಂದುವರಿದರು; ಬಂದವರೆ ಸಂಗ್ರಾಮ ತುತೂರಿಗಳನ್ನೂದಿದರು. ಮರಗಳಿಗ ಆನಿಸಿ ನಿಲ್ಲಿಸಿದ್ದ ಮೂರು ಕೋವಿಗಳನ್ನು ರಾಯ ನಾಯಕನಿಗಾಗಿ ತೆಗೆದುಕೊಂಡರು. ದಾರಿ ಯುದ್ಧಕ್ಕೂ ಗುಂಡುಗಳನ್ನು ಹಾರಿಸುತ್ತ ಮುನ್ನುಗ್ಗಿದರು. ಮದ್ದುಗುಂಡು ಮುಗಿಯುವವರೆಗೂ ಮುಂದೆ ಸಾಗಿದರು. ರಾಯಣ್ಣನೂ ಅವನ ಅನುಯಾಯಿ ಗಳೂ ತೋಳಗಳು ಕುರಿಯ ಹಿಂಡಿನ ಮೇಲೆ ಬಿದ್ದಂತೆ ಶತ್ರುಗಳ ಮೇಲೆ ಹಾರಿದರು; ಕತ್ತಿಗಳನ್ನು ಹಿರಿದು ಅನೇಕರನ್ನು ಕತ್ತರಿಸಿದರು; ಉಳಿದವರು ಭಯಭ್ರಾಂತರಾಗಿ ಚಲ್ಲಾಪಿಲ್ಲಿಯಾಗಿ ಚದರಿ ಓಡಿದರು. ವೈರಿಗಳನ್ನೆಲ್ಲ ಸುತ್ತುಗಟ್ಟಿ ಸುಮಾರು ನಾಲ್ಕು ನೂರು ಮಂದಿಯನ್ನು ಕೊಂದರು. ರಕ್ತದ ಕೋಡಿಯನ್ನು ಹರಿಸಿದರು.

ಬ್ರಿಟಿಷರ ಸೈನ್ಯವು ಕಿತ್ತೂರಲ್ಲಿ ಬೀಡುಬಿಟ್ಟಿತ್ತು. ರಾಯನಾಯಕ ಕಿತ್ತೂರು ಪ್ರವೇಶಮಾಡಿದ. ಅಲ್ಲಿನ ಸೈನಿಕರನ್ನೆಲ್ಲ ಕೊಂದ; ಅಲ್ಲಿಂದ ಅವನು ಹಲ್ಯಾಳ, ಹನುಮನಗಟ್ಟಿ, ತಲವಾಡಿ, ಅಗಸನಗಟ್ಟಿ ಮೊದಲಾದ ಹಳ್ಳಿಗಳನ್ನು ಮುತ್ತಿದ; ಅವುಗಳ ಲೂಟಮಾಡಿದ. ಅನಂತರ ಸಂಪಗಾವ ಕಚೇರಿಯನ್ನು

ಲೂಟಿಮಾಡಿ, ಅದಕ್ಕೆ ಬೆಂಕಿಹಚ್ಚಿ, ಬೂದಿಮಾಡಿದ. ಆ ತಾಲ್ಲೂಕಿನಲ್ಲೆಲ್ಲ ಜಯಭೇರಿ ಹೊಡೆದ. ಅವನನ್ನು ಎದುರಿಸುವವರೇ ಇಲ್ಲವಾಯಿತು.

ಸಾಹೇಬನು ಪ್ರಕಟನೆ ಹೊರಡಿಸಿದ. 'ರಾಯನಾಯಕನನ್ನು ಹಿಡಿದು ಒಪ್ಪಿಸಿದರೆ ಬಹುಮಾನ ಕೊಡುತ್ತೇವೆ' ಎಂದು ಡಂಗುರ ಹಾಕಿಸಿದ. ಆದರೇನು; ರಾಯನಾಯಕನನ್ನು ಹಿಡಿಯುವವರೊಬ್ಬರೂ ಇಲ್ಲ. ಆದರೆ ಮೂವರು ಸಂಚು ಮಾಡಿದರು; ರಹಸ್ಯವಾಗಿ ಆಲೋಚನೆಮಾಡಿದರು. 'ರಾಯನಾಯಕನನ್ನು ನಾವು ಹಿಡಿಯುತ್ತೇವೆ; ಅವನನ್ನು ತಂದು ತಮಗೆ ಒಪ್ಪಿಸುತ್ತೇವೆ' ಎಂದು ಸರದಾರನಿಗೆ ಹೇಳಿದರು. ಹಾಗೆಂದು ಮೂವರೂ ಸರದಾರನಿಗೆ ಬರೆದು, ಭರವಸೆ ಕೊಟ್ಟರು. ಅನಂತರ ಮೂವರೂ ರಾಯನಾಯಕನ ಬಳಿಗೆ ಹೋದರು. 'ನಮ್ಮ ಪ್ರಾಣಗಳನ್ನುಳಿಸಿ. ಜೀವಾವಧಿ ನಾವು ನಿಮ್ಮೊಂದಿಗಿರುತ್ತೇವೆ' ಎಂದು ಅಂಗಲಾಚಿದರು. ಅಗ್ನಿ ಸಾಕ್ಷಿಯಾಗಿ, ಉಪ್ಪುಮುಟ್ಟಿ, ಪ್ರಮಾಣಮಾಡಿದರು.

ಅನಂತರ ಒಳನಾಡು ನುಗ್ಗಿಕೊಳ್ಳ ಹೊಡೆಯೆಂದು ಹೇಳಿದರು. ಎಲ್ಲರೂ ಹುಬ್ಬಳ್ಳಿ ಕಡೆ ಹೊರಟರು. ಅದನ್ನು ಲೂಟಿಮಾಡಿದರು. ಅನಂತರ ಸೈನ್ಯವನ್ನು ಮುಂದಕ್ಕೆ ಕಳುಹಿಸುವಂತೆ ರಾಯಣ್ಣನಿಗೆ ಹೇಳಿ ನಾಲ್ಕು ಜನರೂ ಕೂಡಿ ಹೊರಟರು. ಮಧ್ಯಾಹ್ನ, ಊಟದ ಸಮಯವಾಯಿತು. ಸ್ನಾನ ಮುಗಿಸಿ, ಊಟಮಾಡೋಣವೆಂದು ಮೂವರೂ ಸಲಹೆಮಾಡಿದರು. ರಾಯಣ್ಣ ಬಟ್ಟೆಬರೆ, ಕತ್ತಿ, ತೆಗೆದಿಟ್ಟು, ಸ್ನಾನಕ್ಕೆ ನೀರಿನಲ್ಲಿಳಿದ. ತಕ್ಷಣ ಮೂವರೂ ಸೇರಿ, ರಾಯಣ್ಣನನ್ನು ಹಿಡಿದು, ಕೈಕಾಲುಗಳನ್ನು ಬಿಗಿದು, ಡೋಲಿಯಲ್ಲಿ ಹಾಕಿದರು; ಕಚೇರಿಗೆ ಒಯ್ದರು. ಸರದಾರನಾರೂಪಲಾವಣ್ಯದಿಂದ ಕೂಡಿದ ರಾಯನಾಯಕನನ್ನು ನೋಡಿದ. 'ಏನು ಘನತೆ, ಏನು ಗಾಂಭೀರ್ಯ! ಅವನ ವಿಜಯ ಕೀರ್ತಿ ಕೇಳಿದಂದಿನಿಂದ ಅವನಿಗಾಗಿ ನನ್ನ ಸ್ನಾಯುಗಳು ಕಾತುರಗೊಂಡಿದ್ದುವು' ಅಂದ. 'ರಾಯನಾಯಕನನ್ನು ಕೊಲ್ಲಲಾಗದು' ಎಂಬದಾಗಿ ಹೇಳಿದ. ಹಿಡಿದು ತಂದ ಮೂವರೂ 'ನಮ್ಮನ್ನಿವನು ಬಹಳ ಕಷ್ಟಕ್ಕೆ ಗುರಿಮಾಡಿದ್ದಾನೆ' ಅಂದರು.

> "ಇವನ ಜೀವವನ್ನು ಉಳಿಸಿ ನಮ್ಮ ಪ್ರಾಣಗಳಿಗೇ ಸಂಚಕಾರ ತಂದಿದ್ದೇವೆ. ಅವನನ್ನು ಜೀವ ಸಹಿತವಾಗಿ ಬಿಟ್ಟರೆ ನಾವು ಉಳಿಯುವುದಿಲ್ಲ. ಮೊದಲು ನಮ್ಮನ್ನು ಗಲ್ಲಿಗೆ ಹಾಕಿ; ಅನಂತರ ಅವನ ಬಿಡುಗಡೆಮಾಡಿ"

ಎಂಬದಾಗಿ ಮೂವರೂ ಮುಗಿದ ಕೈಗಳಿಂದ ಸರದಾರನಲ್ಲಿ ಮೊರೆಯಿಟ್ಟರು. ಇದನ್ನೆಲ್ಲ ಕೇಳಿ ಸರದಾರನು ಮುಂಬಯಿಗೆ ಬರೆದ. ಮೇಲಿನವರು ಎಲ್ಲ ವಿಚಾರ ನಡೆಸಿದರು; ಇಂತಹ ಪ್ರಖ್ಯಾತನನ್ನು ಕೊಲ್ಲಲಾಗದೆಂದು ಸರದಾರನಿಗೆ ತಿಳಿಸಿದರು. ಈ ಸುದ್ದಿ ಬರುವುದರೊಳಗಾಗಿ, ಅವಸರವಸರವಾಗಿ, ರಾಯನಾಯಕನನ್ನು ಗಲ್ಲಿಗೇರಿಸಿದರು. ವೀರ ರಾಯನಾಯಕನ ಕೊರಳಿಗೆ ಹಗ್ಗ ಬಿಗಿದರು; ಶವವು ನೇತಾಡುತ್ತಿರಲು ಜನರೆಲ್ಲ ನಿಂತು ಗೋಳಾಡಿದರು.

ಇಂತಹ ವೀರ ಮರಣಕ್ಕೆ ಗುರಿಯಾದನಲ್ಲಾ ಎಂದು ಸರದಾರ ಸಹ ಬಹಳ ಪಶ್ಚಾತ್ತಾಪ ಪಟ್ಟ. ಜನರಿಗೆ ಹತ್ತು ರೂಪಾಯಿಗಳನ್ನು ಕೊಟ್ಟು, ಶವವನ್ನು

ಹೂಳಿರೆಂದು ಹೇಳಿದ. ರಾಯನಾಯಕನಿಗೆ ಉಚಿತವಾದ ಸಮಾಧಿ ಸಂಸ್ಕಾರವಾಯಿತು. ಆ ಸ್ಥಳದಲ್ಲೊಂದು ಆಲದಮರ ನಟ್ಟರು. ವೆಂಕನಗೌಡ, ಲಿಂಗನಗೌಡ, ಬಾಲನಾಯಕರು, ತಾವು ಮಾಡಿದ ಕಾರ್ಯಕ್ಕಾಗಿ ಹಿಗ್ಗಿ, ನಗುತ್ತ ಬಂದರು.

ಬಿಚ್ಚುಗತ್ತಿ ಚೆನ್ನಬಸಣ್ಣ, ಧೀರ ಗಜವೀರ ಇಬ್ಬರೂ ಕೂತು ವಿಚಾರ ಮಾಡಿದರು. ಕಡ್ಡಿಗುಡ್ಡಾ ಬಾಲಣ್ಣ ಕಿಲ್ಲೇದ ಭೀಮಣ್ಣ ಬೆಳವಾಡಿ ವಡ್ಡರ ಯಲ್ಲಣ್ಣ, ಎಲ್ಲರೂ ಸೇರಿ ಕಚೇರಿಗೆ ಹೋದರು. ಸಾಹೇಬನನ್ನು ಕಂಡರು. ‘ನಮ್ಮ ಜೀವನದ ಆತ್ಮವನ್ನೇ ಅಪಹರಿಸಿ ಬಿಟ್ಟಿರಿ’ ಎಂದು ಹೇಳಿದರು. ಕತ್ತಿಗಳನ್ನು ಹಿರಿದು, ಝಳಪಿಸುತ್ತ, ಕಾಡುಪಾಲಾದರು.

---

# ೬. ಕೊಡಗು ಮತ್ತು ಕೆನರಾ ಬಂಡಾಯ (೧೮೩೬--೩೭).

ದಕ್ಷಿಣ ಕನ್ನಡ ಜಿಲ್ಲೆಯಲ್ಲೂ, ಕೊಡಗಿನಲ್ಲೂ, ೧೮೩೩ರಲ್ಲೆ ಬ್ರಿಟಿಷ್ ವಿರುದ್ಧ ಬಂಡಾಯ ಮೊದಲಾಯಿತು. ಆದರೆ ಆದಕ್ಕೆ ಹೆಚ್ಚಿನ ಬಲ ಮತ್ತು ವ್ಯಾಪ್ತಿಯುಂಟಾದದ್ದು ೧೮೩೬-೧೮೩೭ರಲ್ಲಿ. [11] ೧೮೩೭ರಲ್ಲೆ ಇಂಡಿಯಾ ಸರಕಾರದವರು ಕಮಿಷನರ್ ಕಾರ್ಟೆ ಎಂಬಾತನನ್ನು ಈ ಬಂಡಾಯದ ಮೂಲಕಾರಣಗಳು, ಅದರ ವ್ಯಾಪ್ತಿ ಮತ್ತು ಇತರ ಅಂಶಗಳನ್ನು ಕುರಿತು ವಿಚಾರಣೆ ನಡೆಸತಕ್ಕದೆಂದು ನೇಮಿಸಿದ್ದು. ಆತ ವಿಚಾರಣೆಮಾಡಿ, ಬರೆದು ಒಪ್ಪಿಸಿದ ವರದಿಯೇ ಈ ಬಂಡಾಯದ ಚರಿತ್ರೆಗೆ ಮೂಲಾಧಾರ ಸಾಹಿತ್ಯ. ಚೀಫ್ ಕಮಿಷನರ್ ಕಬ್ಬ್ನ ಸಹ ಕಾರ್ಟೆ ವರದಿಯ ವಿಮರ್ಶೆಮಾಡಿ, ತಾನೂ ವಿಚಾರಣೆ ನಡೆಸಿ, ಒಂದು ವರದಿಯನ್ನು ಸಿದ್ಧಮಾಡಿದ. ಈ ಎರಡೂ ವರದಿಗಳ ಸಹಾಯದಿಂದ ಕೆನರಾ ಮತ್ತು ಕೊಡಗಿನ ಬಂಡಾಯದ ಕಥೆಗೆ ಒಂದು ರೂಪ ಕೊಡಲು ಸಾಧ್ಯ.

೧೮೩೧ರಲ್ಲಿ ಮೈಸೂರು ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರು ಪದಚ್ಯುತರಾದರು. ಕೊಡಗಿನ ವೀರರಾಜೇಂದ್ರ ಒಡೆಯರೂ ರಾಜ್ಯವನ್ನು ಕಳೆದುಕೊಂಡು ದೇಶಾಂತರವಾಸಿಗಳಾದರು. ಇವೆರಡೂ ಸಂಸ್ಥಾನಗಳ ಭವಿಷ್ಯ ನಿರ್ಧಾರ ಕಾರ್ಯದಲ್ಲಿ ಬ್ರಿಟಿಷ್ ಸರಕಾರದವರು ನಿಯುಕ್ತರಾಗಿದ್ದರು. ಆಗಲೆ, ಸುಮಾರು ೧೮೩೩ರಲ್ಲೆ, ಅಪರಂಪರನು ಕಾಣಿಸಿಕೊಂಡದ್ದು. ಇವೆರಡೂ ಸಂಸ್ಥಾನಗಳ ಸಿಂಹಾಸನಗಳ ಪುನರುದ್ಧಾರಕ್ಕಾಗಿ ಅಪರಂಪರನು ರಾಯಭಾರ ನಡೆಸಿದ ಹಾಗೂ, ಬ್ರಿಟಿಷ್ ಸರಕಾರದ ಉದ್ದೇಶವನ್ನು ಭಂಗಗೊಳಿಸಲು ಸರ್ವ ಪ್ರಯತ್ನಮಾಡಿದ ಹಾಗೂ ಕಂಡುಬರುತ್ತದೆ. ಅಂದಿನಿಂದ ಅವನು ಬ್ರಿಟಿಷರ ಬದ್ಧವೈರಿಯಾದನೆಂದೂ, ಬಂಡಾಯವಂದಿನಿಂದ ಮೊದಲಾಯಿತೆಂದೂ ಹೇಳಬಹುದು. ಅಪರಂಪರನು ತನ್ನ ಜೀವಾವಧಿ ಬ್ರಿಟಿಷರ ಪರಮ ವೈರಿಯಾಗಿದ್ದ.

೧೮೩೪ ರಲ್ಲಿ ಕೊಡಗಿನಲ್ಲಿ ಯುದ್ಧವಾರಂಭವಾಯಿತಷ್ಟೆ. ಅದಕ್ಕೆ ಮೊದಲೆ ಅಪರಂಪರ ಕೊಡಗನ್ನು ಬಿಟ್ಟ. ಅದರ ಗಡಿಯ ಸಮೀಪದ ಕಾಜುಗೋಡು ಗ್ರಾಮ ಸೇರಿದ. ಪಟೇಲ ಮಲಪ್ಪಗೌಡನ ಆಶ್ರಯ ಪಡೆದ. ಕಾಜುಗೋಡು ದಕ್ಷಿಣ ಕನ್ನಡ ಪ್ರದೇಶಕ್ಕೆ ಸೇರಿದ್ದು. ಉತ್ತರ ಕೊಡಗಿನ ಗೌಡರಿಗೂ, ಮಲಪ್ಪ ಗೌಡನಿಗೂ ಕುಲಬಾಂಧವ್ಯ ನಿಕಟವಾಗಿತ್ತು. ಅಲ್ಲದೆ ಅಲ್ಲಿನ ರೈತರಲ್ಲೆಲ್ಲ ಮಲ್ಲಪ್ಪ ಹೆಸರುವಾಸಿಯಾಗಿದ್ದ. ಮೇಲಾಗಿ ಇವನು ಕೊಡಗಿನ ಅರಸರಾದ ಲಿಂಗರಾಜ, ವೀರರಾಜರ ಆಪ್ತ; ಅವರ ಅಂತರಂಗಕ್ಕೆ ಸೇರಿದವ. ಕಾಜುಗೋಡಿಗಿಂತ, ಮಲಪ್ಪನ ಆಶ್ರಯಕ್ಕಿಂತ, ತನ್ನ ಉದ್ದೇಶ ಸಾಧನೆಗೆ ಅನುಕೂಲ ಕ್ಷೇತ್ರ, ಅವಕಾಶ ಬೇರೊಂದಿಲ್ಲವೆಂದು ಅಪರಂಪರ ಅರಿತ. ಜಂಗಮಸ್ವಾಮಿಯೆನಿಸಿ, ಅಂಧ ಶ್ರದ್ಧೆಯ ಸಾಮಾನ್ಯ ಜನರನ್ನಾಕರ್ಷಿಸಿದ. ಅನೇಕ ಪವಾಡಗಳನ್ನು ಮೆರೆಸಿ, ಜನರ ಮೇಲೆ ಗುರು ಪ್ರಭಾವ ಬೀರಿದ.

[11] The Government of India ordered on 12th September 1837 an enquiry into the Insurrection in Canara and Coorg.

ಇದರಿಂದ ಸಿಪಾಯಿಗಳ ಹೃದಯಗಳೆಷ್ಟು ಕಲಕಿಹೋಯಿತೆಂಬುದು ಗೊತ್ತಾಗುತ್ತದೆ. ಸಿಪಾಯಿಗಳ, ಜನಸಾಮಾನ್ಯರ, ಧಾರ್ಮಿಕ ಭಾವನೆ, ನಂಬಿಕೆ, ಆಚಾರಗಳ ವಿಷಯದಲ್ಲಿ ಅವರಿಗೆಲ್ಲ ಪ್ರಭುತ್ವದಲ್ಲಿ ಪೂರ ಅಪನಂಬಿಕೆ ಹುಟ್ಟಿತು. ಸಿಪಾಯಿಗಳ ಮನಸ್ಸಿಗಂತೂ ಬಹಳ ನೋವಾಯಿತು. ದೂರ ದೇಶಗಳಿಗೆ ಸಿಪಾಯಿಗಳು ಹೋಗಿ ಹೊಡೆದಾಡಬೇಕಾದ ವಿಷಯವಾಗಿ ಹೊರಟ ಹೊಸ ಆಜ್ಞೆಗಳೂ, ಸಿಪಾಯಿಗಳ ಬಟ್ಟೆಬರೆ, ಅಭ್ಯಾಸಗಳನ್ನು ಕುರಿತು ಹೊರಟ ಆಜ್ಞೆಗಳೂ, ಕಂಪೆನಿ ಸರಕಾರದ ವಿಚಾರದಲ್ಲಿ ಸಿಪಾಯಿಗಳಲ್ಲಿ ಅಪ್ರಿಯ ಭಾವನೆಯನ್ನು ವೃದ್ಧಿಗೊಳಿಸಿದುವು.

ಕಳೆದ ಶತಮಾನಾರಂಭದಿಂದ ದೇಶದಲ್ಲಿ ಪಾದ್ರಿಗಳ ಚಟುವಟಿಕೆಗಳು ಅಸಾಧ್ಯವಾಗಿ ಮುಂದುವರಿಯುತ್ತ ಬಂದುವು. ಶಾಲೆಗಳಿಗೆ ಹೋಗಿ, ಆಸ್ಪತ್ರೆಗಳಿಗೆ ಹೋಗಿ, ಸೆರೆಮನೆಗಳಿಗೆ ಹೋಗಿ, ಅನಾಥಾಲಯಗಳಿಗೆ ಹೋಗಿ, ಸಂತೆಮಾಳಕ್ಕೆ ಹೋಗಿ—ಎಲ್ಲೆಲ್ಲೂ ಪಾದ್ರಿಗಳೇ! ಪಾದ್ರಿಗಳು ತಮ್ಮ ಧರ್ಮ, ತಮ್ಮ ನಂಬಿಕೆಗಳನ್ನು ಕುರಿತು ಬೇಕಾದಷ್ಟು ಪ್ರಚಾರ ಮಾಡಲಿ; ಜನರಿಗೆ ಬೋಧನೆ ಮಾಡಲಿ. ಯಾರೂ ಬೇಡವೆನ್ನುವುದಿಲ್ಲ. ಅವರವರ ಧರ್ಮಪ್ರಚಾರಮಾಡುವುದು ಅವರವರ ಹಕ್ಕು. ಆದರೆ ಪಾದ್ರಿಗಳಿಗೆ ಏಸು ಸಂದೇಶ ಪ್ರಚಾರಮಾತ್ರದಿಂದ ತೃಪ್ತಿ ಇಲ್ಲ. ಹಿಂದೂ, ಮುಸ್ಲಿಂ, ಧರ್ಮಗಳ, ಆಚಾರವಿಚಾರಗಳ, ಸಮಯಸಂಪ್ರದಾಯಗಳ, ಅವಹೇಳನ ಮಾಡದೆ ಅವರಾತ್ಮಕ್ಕೆ ಸಮಾಧಾನವಿಲ್ಲ. ಸಾಮಾನ್ಯ ಜನರ ದೃಷ್ಟಿಯಲ್ಲಿ, ನಂಬಿಕೆಯಲ್ಲಿ, ಐರೋಪ್ಯ ಪಾದ್ರಿಗಳೂ, ಆಂಗ್ಲ ಅಧಿಕಾರಿಗಳೂ, ಇಬ್ಬರೂ ಒಂದೇ. ಪಾದ್ರಿಗಳು ಏಸು ಧರ್ಮವನ್ನು ಹೊಗಳುತ್ತ, ಹಿಂದೂ ಇಸ್ಲಾಂ ಧರ್ಮಗಳನ್ನು ಅವಹೇಳನ ಮಾಡುತ್ತಾ ಇರುವಾಗ, ಸಭೆಗಳಲ್ಲಿ ಪಾದ್ರಿಗಳ ಸಂರಕ್ಷಣೆಗಾಗಿ ಪೋಲೀಸಿನವರು ಕಾವಲಿರುತ್ತಿದ್ದರು!

ಅವರು ಶಾಲೆಗಳನ್ನು ಸ್ಥಾಪಿಸಿ, ನಡೆಸುತ್ತ ಬಂದರು. ಆ ಶಾಲೆಗಳಲ್ಲೆಲ್ಲ ಬೈಬಲ್ ಪಾರಾಯಣವಾಗಲೇ ಬೇಕು. ಯೇಸು ಧರ್ಮದ್ದು ಸತ್ಯದ ಗುತ್ತಿಗೆ. ಆ ಧರ್ಮವನ್ನಂಗೀಕರಿಸಿದ್ದಲ್ಲದೆ ಯಾರಿಗೂ ಮೋಕ್ಷವೇ ಇಲ್ಲ. ಈ ಬಗೆಯಾಗಿ

---

have exacted as revenue rupees 300 where only 200 were due and rupees 500 where but 400 were demandable and still they are solicitous to raise their demands. The people must therefore be ruined and beggared. Secondly, they have doubled and quadrupled and raised tenfold the chowkidaree tax and have wished to ruin the people. Thirdly, the occupation of all respectable and learned men is gone, and millions are destitute of the necessaries of life. When any one in search of employment determines on proceeding from one zillah to another, every soul is charged six pie as toll on roads, and has to pay from 4 to 8 annas for each cart. Those only who pay are permitted to travel on the public roads. How far can we detail the oppression of the tyrants! Gradually matters arrived at such a pitch that the Government had determined to subvert everyone's religion."

—(*Foreign Secret Consultations, No.* 14, 30*th April* 1938.—Quoted in '*Eighteen Fifty-seven*' by Prof. Sen, *p*.1).

ತರುಣ ತರುಣಿಯರಿಗೆ ಉಪದೇಶಾಮೃತ ಪಾನ ಮಾಡಿಸುತ್ತಿದ್ದರು. ಸೆರೆಮನೆಗಳಿಗೆ ಪಾದ್ರಿಗಳು ಹೋಗಿ, ಪ್ರತಿ ಭಾನುವಾರ ಬೆಳಿಗ್ಗೆ ಬೈಬಲ್ ಬೋಧಿಸುತ್ತಿದ್ದರು. ವಿಧರ್ಮಿ ಬಂದಿಗಳಿಗೆ 'ಜ್ಞಾನ ಸ್ನಾನ' ಮಾಡಿಸುವ ಪಾದ್ರಿಗಳ ಈ ಪವಿತ್ರ ಕಾರ್ಯದಲ್ಲಿ ಮ್ಯಾಜಿಸ್ಟ್ರೇಟರುಗಳೂ ಪಾದ್ರಿಗಳಿಗೆ ನೆರವಾಗುತ್ತಿದ್ದರು. ಆಸ್ಪತ್ರೆಗಳ ಮಾತನ್ನು ಹೇಳಲೇಬೇಕಾಗಿಲ್ಲ. ಬಿಳಿಯ ಜನರ ಈ ವ್ಯಾಪಾರಗಳೆಲ್ಲ ಜನಸಾಮಾನ್ಯರ ಮನಸ್ಸನ್ನು ಕೆಡಿಸಿದುವು. ಪ್ರಭುತ್ವದವರು ಪ್ರಜೆಗಳನ್ನೆಲ್ಲ ತಮ್ಮ ಧರ್ಮಕ್ಕೆ ಸೇರಿಸಿಕೊಂಡು, ಅವರನ್ನು ಸ್ವಧರ್ಮಭ್ರಷ್ಟರನ್ನಾಗಿ ಮಾಡುವ ಸಂಕಲ್ಪವುಳ್ಳವರಾಗಿದ್ದಾರೆಂಬ ನಂಬಿಕೆ ಜನರಲ್ಲಿ ಬಲವಾಯಿತು.

ಈ ಹಿನ್ನೆಲೆಯಲ್ಲಿ ೧೮೫೦ನೆಯ ಮತೀಯ ನ್ಯೂನತೆಗಳ ಶಾಸನ,[6] ೧೮೫೬ನೆಯ ಹಿಂದೂ ವಿಧವಾ ಪುನರ್ವಿವಾಹ ಶಾಸನಗಳ, ವಿಚಾರ ಮಾಡಬೇಕು. ಹಿಂದುಗಳು ಮತಾಂತರ ಹೊಂದಿದಾಗ ಅವರಿಗೆ ಲೌಕಿಕವಾದ ಎಲ್ಲ ಹಕ್ಕುಗಳನ್ನೂ ಕೊಟ್ಟು, ಅವರನ್ನು ಕಾಪಾಡುವುದು ಮೊದಲನೆಯ ಶಾಸನದ ಉದ್ದಿಶ್ಯ. ಈ ಶಾಸನವನ್ನೂ, ಪಾದ್ರಿಗಳ ಮತಾಂತರಗೊಳಿಸುವ ಪ್ರಚಂಡ ಪ್ರಚಾರ, ಕಾರ್ಯಕ್ರಮಗಳನ್ನೂ, ಕಂಡ ಜನರು ಸರಕಾರದವರು ನಮ್ಮ ಧರ್ಮ, ನಮ್ಮ ಸಂಪ್ರದಾಯ, ನಮ್ಮ ಸರ್ವಸ್ವವನ್ನೂ, ಧ್ವಂಸ ಮಾಡುವ ಉದ್ದಿಶ್ಯ ಉಳ್ಳವರಾಗಿದ್ದಾರೆ. ನಮ್ಮ ಸಮಾಜ ರಚನೆ, ಪಾರಂಪರ್ಯವಾಗಿ ನಾವು ಕಾಪಾಡಿಕೊಂಡು ಬಂದಿರುವ ಸತ್ಸಂಸ್ಕೃತಿಯೆಲ್ಲವೂ ನಾಶವಾಗುವ ಕಾಲ ಬಂತು. ಈ ಬಗೆಯ ಯಾತನಾ ತರಂಗಗಳು ಪ್ರತಿಯೊಬ್ಬರ ತಲೆಗಳಲ್ಲೂ ಹೊರಳಲಾರಂಭಿಸಿದುವುದು. "ದೇಶದ ಮೂಲೆ ಮೂಲೆಗಳಲ್ಲೂ, ಸಿಪಾಯಿಗಳ ಪಡೆಪಡೆಗಳಲ್ಲೂ, ಧರ್ಮಕ್ಕೆ ಸಂಚಕಾರ ಬಂತು" ಎಂಬ ಕೂಗು ಕೇಳಿ ಬಂತು.

ಧರ್ಮದ ಮಾತು ಹಾಗಿರಲಿ; ಸಿಪಾಯಿಗಳ ಗೊಣಗಾಟಕ್ಕೆ ಕಾರಣಗಳನೇಕ. ಅವರ ಸಂಬಳಸಾರಿಗೆಗಳು, ಅವರ ಜೀವನ ಭವಿಷ್ಯ, ಆಶಾದಾಯಕವಾಗಿರಲಿಲ್ಲ. ತಮ್ಮಂತೆಯೇ ಜತೆಯಲ್ಲಿದ್ದ ಬಿಳಿಯ ಸೋಜರುಗಳ ಸಂಬಳ ಸಾರಿಗೆಗಳೊಂದಿಗೆ ಹೋಲಿಸಿ ನೋಡಿದಾಗ ಅಂತರವು ಅಸಾಧ್ಯ, ಅನ್ಯಾಯವಾಗಿತ್ತು. ಸಿಪಾಯಿ ಕೈಗೆ ಬಂದದ್ದು ಅವನ ತುತ್ತಿಗೆ ಸಾಲದು. ಬಿಳಿಯ ಸೋಜರು, ಬಿಳಿಯ ಅಧಿಕಾರಿಯಾದರೋ, ಭೋಗ ಜೀವನ ನಡೆಸುತ್ತಿದ್ದ. ಈ ಪಕ್ಷಪಾತ ಪ್ರಭಾವವು ಸಿಪಾಯಿಗಳ ಮೇಲೆ ಬೀಳದೆ ಹೋಗಲಿಲ್ಲ. ಬ್ರಿಟಿಷ್ ಅಧಿಕಾರಿಗಳಾದರೋ ಸಿಪಾಯಿಗಳನ್ನು ಮರ್ಯಾದೆಯಿಂದ ನೋಡದೆ ಹೋಗುವ ಮಾತು ಹಾಗಿರಲಿ, ಅವರನ್ನು 'ನಿಗ್ಗರ್', 'ಸುವ್ವರ್' ಎಂಬದಾಗಿ ಕರೆಯುತ್ತ, ದುರ್ಭಾಷೆಯಲ್ಲಿ ರಮಿಸುತ್ತಿದ್ದರು.

ಸಿಪಾಯಿಗಳು ಹೇಗೆ ತಾನೆ ಸರಕಾರವನ್ನು ಸ್ನೇಹಪರತೆಯಿಂದ ಕಂಡು ವರ್ತಿಸಿಯಾರು? ಸಾಮಾನ್ಯ ಜನರು ಸಹ ಸರಕಾರದ ವಿಚಾರದಲ್ಲಿ ವಿಶ್ವಾಸವುಳ್ಳವರಾಗಿರಲಿಲ್ಲ. ವಿದ್ಯಾವಂತ ಬಂಗಾಳದ ಹಿಂದುಗಳೊಬ್ಬರ ಮಾತಿನಲ್ಲಿ

[6] Religious Disabilities Act of 1850.

ಹೇಳುವುದಾದರೆ “ಔದಾರ್ಯ ಲೇಶದಿಂದಲೂ ಲಿಪ್ತವಾಗದ ನೂರು ವರ್ಷಗಳ, ಶಮನಮುಖವನ್ನೇ ಮಾಡದ, ಕಠೋರ ಪ್ರಭುತ್ವ” ಈ ಬ್ರಿಟಿಷ್ ಪ್ರಭುತ್ವ. ಇಂತಹ ಪ್ರಭುತ್ವದಲ್ಲಿ ಜನರಿಗೆ ಗೌರವವಾಗಲಿ, ವಿಶ್ವಾಸವಾಗಲಿ ಹೇಗೆ ಹುಟ್ಟೀತು? ಆಳುವ ಕುಲಗೋತ್ರಕ್ಕೆ ಸೇರಿದವರೆಲ್ಲ ಅವರಾಳ್ವಿಕೆಗೆ ಒಳಪಟ್ಟವರನ್ನು ದೂರವಾಗಿರಿಸಿ, ತಮಗೂ ಅವರಿಗೂ ಸಾಮಾಜಿಕ ಸಂಪರ್ಕವೇ ಇಲ್ಲದಂತೆ ಮಾಡಿ, ಅವರನ್ನೆಲ್ಲ ತುಚ್ಛವಾಗಿ ಕಂಡರು. ೧೮೫೭ರ ಮಹಾ ಕೋಲಾಹಲಕ್ಕೆ ಕಾರಣಗಳನೇಕ. ಅವುಗಳಲ್ಲಿ ಬಿಳಿಯ ಆಳರಸರು ಭಾರತೀಯರ ವಿಚಾರದಲ್ಲಿ ತೋರಿಸಿದ ಈ ತುಚ್ಛಭಾವನೆಯೂ ಒಂದು. ಇದರಿಂದ ಭಾರತೀಯರಲ್ಲಿ ಆಂಗ್ಲರನ್ನು ಕಂಡರೆ ಕಿಡಿಕಿಡಿಯಾಗುವ ನಡತೆ ತಲೆಹಾಕಿತು. ಹೆಚ್ಚೇನು ಭಾರತೀಯರು ಆಂಗ್ಲರಲ್ಲಿ ವೈರಭಾವವನ್ನೇ ಬೆಳೆಸಿಕೊಳ್ಳುತ್ತ ಬಂದರು. ಬಿಳಿಯವನ ಕಡೆ ನೋಡುವುದು ಕೂಡ ಅವರಿಗೆ ಬೇಡವಾಯಿತು.

ಸರಕಾರದ ಭಾರಿ ಅಧಿಕಾರಸ್ಥಾನಗಳಿಗೆಲ್ಲ ಭಾರತೀಯರು ಬಾಹಿರರಾದರು. ಆ ಸ್ಥಾನಗಳೆಲ್ಲ ಆಂಗ್ಲರ ಗುತ್ತಿಗೆದಾರಿಗಳಾದುವು. ಇದು ಬೇರೆ ಜನರ ಅಸಮಾಧಾನ, ಅತೃಪ್ತಿಗಳನ್ನು ಹೆಚ್ಚಿಸಿತು.

> “ಆಡಳಿತಾಂಗದಲ್ಲಿ ‘ಡೆಪ್ಯುಟಿ ಕಲೆಕ್ಟರ್’, ನ್ಯಾಯದಾನಾಂಗದಲ್ಲಿ ‘ಸದರ್-ಅಮೀನ್’, ಇವೆರಡೇ ಭಾರತೀಯರು ಪಡೆಯಬಹುದಾದ ಉನ್ನತ ಅಧಿಕಾರ ಸ್ಥಾನಗಳು. ಭಾರತೀಯರಲ್ಲಿ ಮೇಧಾವಿಗಳಿಗೇನೂ ಕೊರತೆ ಇಲ್ಲ. ತಮ್ಮ ಜೀವಿತ ಕಾಲದಲ್ಲೇ ಅವರು ತಮ್ಮ ಅಪ್ಪಂದಿರೂ, ಅಜ್ಜಂದಿರೂ, ಪ್ರಾಂತ್ಯಗಳ ಆಡಳಿತ ನಡೆಸಿದ್ದುದನ್ನೂ, ಸೈನ್ಯಗಳಲ್ಲಿ ದಂಡನಾಯಕರಾಗಿದ್ದುದನ್ನೂ ಕಂಡಿದ್ದರು. ಅವುಗಳ ನೆನಪಿನ್ನೂ ಅವರಿಗಿತ್ತು. ನಿರುದ್ಯೋಗ, ಇಲ್ಲವೆ ಕೆಲಸಕ್ಕೆ ಬಾರದ ಚಿಲ್ಲರೆ ಉದ್ಯೋಗ; ಇವೆರಡನ್ನು ಬಿಟ್ಟರೆ ಭಾರತೀಯರಿಗೆ ಬೇರೆ ಅವಕಾಶವೇ ಇಲ್ಲ. ಭರಿಸಲಸಾಧ್ಯವಾದ ಅವಮಾನ ಪರಿಸ್ಥಿತಿ ಇದು.”[7]

ಇನ್ನು ನರೇಂದ್ರಗಣದ ಮಾತು. ಅವರಿಗೆ ಕೆಟ್ಟಕಾಲ ಬಂತು. ಸರ್ವನಾಶ ಪರಿಸ್ಥಿತಿಯೊದಗಿತು. ೧೮೪೯ರಲ್ಲಿ ಪಂಜಾಬು ಬ್ರಿಟಿಷರ ಕೈಸೇರಿತು. ಸತಾರಾ, ಝಾನ್ಸಿ, ತಂಜಾವೂರು ಅರಸರಿಗೆ ಸಹಜ ಸಂತಾನವಿಲ್ಲವೆಂಬ ನೆಪದಿಂದ ಆ ಸಣ್ಣ

---

7 “. . . . The highest office to which an Indian could aspire was that of a Deputy Collector in the executive, and of Sadr Amin in the judicial branch of the administration. Yet there was no lack of talent among the Indians. Within living memory their fathers and grandfathers had governed provinces and commanded armies. It was most galling to find no alternative between unemployment and minor offices of no consequence.”

—*Eighteen Fifty-seven*, by Prof. Surendra Nath Sen, p. 31.

ಸಂಸ್ಥಾನೆಗಳನ್ನೆಲ್ಲ ಆಳರಸರು ವಶಪಡಿಸಿಕೊಂಡರು. ನಾಗಪುರದೆರಸನೂ ಸಂತಾನ ಶೂನ್ಯನಾಗಿ ಸತ್ತ. 'ಸ್ವಾಹಾಕಾರ ತತ್ವ'ದಂತೆ ಆ ಸಂಸ್ಥಾನವೂ ಕಂಪೆನಿಯ ಸಾಮ್ರಾಜ್ಯಗರ್ಭದಲ್ಲಿ ಐಕ್ಯವಾಗಿ ಹೋಯಿತು. ಕಟ್ಟಕಡೆಯ ಪೇಷ್ವಾ ದತ್ತು ಮಗ ನಾನಾ ಸಾಹೇಬನ ನಿವೃತ್ತ ರಾಜವೇತನವನ್ನೂ ಡಾಲ್‌ಹೌಸಿ ನಿಲ್ಲಿಸಿಬಿಟ್ಟ. ನಾನಾ ಸಾಹೇಬನು ಅಜೀಮುಲ್ಲಾ ಖಾನನನ್ನು ತನ್ನ ವಕೀಲನನ್ನಾಗಿ ನೇಮಿಸಿ, ಅವನನ್ನು ವಿಲಾಯಿತಿಗೆ ಕಳುಹಿಸಿ, ತನ್ನ ನಿವೃತ್ತ ವೇತನಕ್ಕಾಗಿ ಮಹಾ ಪ್ರಯತ್ನಮಾಡಿದ. 'ಕೋರ್ಟ್ ಆಫ್ ಡೈರೆಕ್ಟರು'ಗಳು ಖಾನನ ವಾದವನ್ನು ಕೇಳಿ, ಪ್ರಾರ್ಥನೆಯನ್ನು ನಿರಾಕರಿಸಿದರು. ನಿರಾಶನಾಗಿ ಅಜೀಮುಲ್ಲಾ ಖಾನ ಹಿಂತಿರುಗಿದ. ನಾನಾ ಸಾಹೇಬನ ಮಾನಸಿಕ ಸ್ಥಿತಿಯನ್ನು ಸುಲಭವಾಗಿ ಭಾವಿಸಿಕೊಳ್ಳಬಹುದು. 'ನ್ಯಾಯವೆಲ್ಲಿ, ನೀತಿಯೆಲ್ಲಿ. ಬ್ರಿಟಿಷ್ ಪ್ರಭುತ್ವವನ್ನು ಉರುಳಿಸುವುದೊಂದೇ ಉಳಿದಿರುವುದು' ಎಂಬದಾಗಿ ವಿಚಾರ ಮಾಡಿದ, ಸಂಕಲ್ಪಮಾಡಿದ. 'ಕಡಿದ ಗಾಯಕ್ಕೆ ಕಲ್ಲುಪ್ಪು' ಎಂಬ ನಾಣ್ಣುಡಿಯಂತೆ ಕ್ರಮಕ್ರಮವಾಗಿ ಕಬಳಿಸಲಾರಂಭಿಸಿದ್ದ ಅಯೋಧ್ಯಾ ರಾಜ್ಯವನ್ನೂ ಬ್ರಿಟಿಷರು ೧೮೫೬ರಲ್ಲಿ ಆಕ್ರಮಿಸಿಬಿಟ್ಟರು. ಈ 'ಆಕ್ರಮಣ' ಮಾರ್ಗವಾದರೂ ಬಹಳ ದೂಷ್ಯವಾಗಿತ್ತು. ಅಭಿಮಾನಧನರಾದ ಭಾರತೀಯರ ಸೂಕ್ಷ್ಮ ಹೃದಯಕ್ಕೆ ಬಹಳ ನೋವನ್ನುಂಟುಮಾಡಿತು.

ಡಾಲ್‌ಹೌಸಿಯು ಅನುಸರಿಸಿದ 'ಸ್ವಾಹಾಕಾರ' ನೀತಿಯೇ ೧೮೫೭ರ ವಿಪ್ಲವಕ್ಕೆ ಕಾರಣವೆಂಬುದು ಸಾಮಾನ್ಯವಾಗಿ ಎಲ್ಲರ ಅಭಿಪ್ರಾಯ. ಯಾವದೇ ಒಂದು ಕೆಲಸ, ಒಂದು ಪ್ರಕರಣ, ಈ ವಿಪ್ಲವಕ್ಕೆ ಕಾರಣವಲ್ಲ. ಬೆಂಟಿಂಕ್, ಆಮ್‌ಹರ್ಸ್ಟ್, ಆಕ್ಲೆಂಡ್, ಎಲ್ಲೆಬರೋ ಮುಂತಾದವರೆಲ್ಲ ಮಾಡಿದ ಅಪರಾಧ, ಕರ್ತವ್ಯ ಪರಾಙ್ಮುಖರಾಗಿ ಮಾಡಿದ ಅಪರಾಧ, ಇವೆಲ್ಲ ಸೇರಿ, ಮಹಾಪರಾಧವೆನಿಸಿ, ಸಾಧು, ವಿವೇಕಯುತ, ಭಾರತೀಯ ಸಾರ್ವಜನಿಕಾಭಿಪ್ರಾಯ ಬಲವನ್ನು ನೀಗಿಕೊಂಡಿತು. ಭಾರತೀಯರ ಅಮೂಲ್ಯವೆನಿಸಿದ, ಅವರ ಪ್ರಾಣಪ್ರಾಯವೆನಿಸಿದ, ಪ್ರಾಚೀನ ಹಕ್ಕುಗಳಿಗೆ, ಪವಿತ್ರ ಮರ್ಯಾದೆಗಳಿಗೆ, ಸಂಚಕಾರ ಬಂತು. ಪರದೇಶೀ ಪ್ರಭುತ್ವ ರಚನೆಯು ಪ್ರಜೆಗಳ 'ರಾಜಭಕ್ತಿ'ಯ ಅಸ್ತಿಭಾರದ ಮೇಲೆ ನಿರ್ಮಾಣವಾಗಲಿಲ್ಲ; ಪ್ರಭುತ್ವದ 'ಪಶುಬಲ'ದ ಅಸ್ತಿಭಾರದ ಮೇಲೆ ನಿರ್ಮಾಣವಾಯಿತು. 'ಎಂದಿನವರೆಗೆ ನಮ್ಮ ಬಾಹು ಪರಾಕ್ರಮದ ಮೇಲೆ ಈ ಪ್ರಭುತ್ವ ನಿಂತಿರುವುದೋ ಅಂದಿನವರೆಗೆ ಅದು ಇದ್ದೀತು. ಎಂದು ನಮಗದು ಬೇಡವೆನಿಸುವುದೋ ಅಂದೇ ಅದನ್ನು ನಾವು ಉರುಳಿಸಬಲ್ಲೆವು'—ಈ ವಿಧವಾದ ವಿಚಾರಲಹರಿ ಸಿಪಾಯಿಗಳ ತಲೆಗಳಲ್ಲಿ ಹರಿಯಲಾರಂಭಿಸಿತು. 'ಉಪ್ಪುಂಡ ಮನೆಗೆ ಎರಡು ಬಗೆಯಬಾರದು' ಎಂಬ ಧರ್ಮಕ್ಕೆ ಇದುವರೆಗೆ ಸಿಪಾಯಿ ಗಂಟು ಬಿದ್ದಿದ್ದ. ಎಂದು 'ನನ್ನ ಧರ್ಮಕ್ಕೆ ಕೊಡಲಿಯೇಟು ಬೀಳುವ ಕಾಲ ಬಂತು' ಎಂಬದಾಗಿ ಭಾವಿಸಲಾರಂಭಿಸಿದನೋ, ಆ ಕ್ಷಣದಿಂದಲೇ ಅವನ 'ರಾಜಭಕ್ತಿ'ಯ ಮೂಲಾಧಾರ ನುಚ್ಚುನೂರಾಯಿತು.

೧೮೫೭ನೇ ಮೇ ೧೦ನೇ ತಾರೀಖಿನ ದಿನ ಮೀರತ್ತಿನಲ್ಲಿ ಸ್ಫೋಟನವಾಯಿತು; ದಾವಾನಲವು ದೇಶಾದ್ಯಂತ ಹರಡಿತು.

ದಂಗೆಯ ಕಾರಣಗಳನ್ನು ಕುರಿತು ಕೊಂಚ ವಿಚಾರಮಾಡಿದ್ದಾಯಿತು. ಇನ್ನೊಂದೆರಡು ಅಂಶಗಳನ್ನು ಕುರಿತು ಹೇಳಬೇಕಾದದ್ದು ಉಳಿದಿದೆ. "ಇದೇನು ಅತೃಪ್ತರಾದ, ಅಸಮಾಧಾನಗೊಂಡ ಸಿಪಾಯಿಗಳ ಪ್ರತಿಭಟನೆಯೋ; ಇಲ್ಲ ಚತುರ ರಾಜಕಾರಣಿಗಳು ದೀರ್ಘಾಲೋಚನೆಮಾಡಿ, ಸಂಚುಹೂಡಿ, ಎಬ್ಬಿಸಿದ ಬಂಡಾಯವೊ; ಪರದೇಶೀ ಪ್ರಭುತ್ವವನ್ನು ಕೊನೆಗಾಣಿಸಬೇಕೆಂದು ಸರ್ವ ಸಾಮಾನ್ಯ ಜನರು ಸೇರಿ, ನಡೆಸಿದ ಹೋರಾಟವೊ?". ಈ ಪ್ರಶ್ನೆಗಳಿಂದಿಗೂ ವಿಚಾರಪರರ ಮುಂದಿವೆ. ಈ ಬಂಡಾಯಕ್ಕೆ ಸುವ್ಯವಸ್ಥಿತ ಪೂರ್ವಾಲೋಚನೆ, ಪೂರ್ವಸಿದ್ಧತೆ, ಕಾರ್ಯಕ್ರಮ ಯೋಜನೆ, ಯಾವುದೂ ಇರಲಿಲ್ಲ. ಸರಿಯಾದ ನಾಯಕತ್ವ ಇರಲಿಲ್ಲ. ಇವುಗಳಿಗೆ ಸಂಬಂಧಪಟ್ಟಹಾಗೆ ಕಾಗದಪತ್ರಗಳು ಯಾವುವೂ ಸಿಕ್ಕಿಲ್ಲ—ಈ ಬಗೆಯ ಆಕ್ಷೇಪಣೆಗಳಿವೆ. ಕಾಗದಪತ್ರಗಳಿಲ್ಲವೆಂಬ ಒಂದು ಕಾರಣದಿಂದ ಆಲೋಚನೆ, ಸಿದ್ಧತೆ, ಕಾರ್ಯಕ್ರಮ, ನಾಯಕರು—ಏನೂ ಇರಲಿಲ್ಲವೆಂದು ವಾದಿಸುವುದು ತರ್ಕಬದ್ಧವಾಗಿಲ್ಲ. ನಡೆಸಿದ ಕೆಲಸವಾದರೋ ಅಪೂರ್ವ ಬಲದ ಬ್ರಿಟಿಷ್ ಪ್ರಭುತ್ವದಮೇಲೆ ಬಂಡಾಯ. ಈ ಬಂಡಾಯದ ಎಲ್ಲ ಕೆಲಸಗಳನ್ನೂ ಅತ್ಯಂತ ಜಾಗರೂಕತೆಯಿಂದ, ರಹಸ್ಯವಾಗಿ, ನಡೆಸಬೇಕು. ಇಂತಹ ಕೆಲಸಗಳನ್ನು ವಿವೇಕಿಗಳು ಯಾರೂ ಕಾಗದಪತ್ರಗಳ ಮೂಲಕ ನಡೆಸುವುದಿಲ್ಲ. ಅವು ಬೆಳಕಿಗೆ ಬಂದರೇನಾಗುವುದೆಂಬ ತಿಳವಳಿಕೆ ಬಂಡಾಯಗಾರರಿಗೆ ಚೆನ್ನಾಗಿ ಗೊತ್ತು. ಒಂದು ವೇಳೆ ಒಂದೆರಡು ಕಾಗದಪತ್ರಗಳಿದ್ದುವೆಂದೇ ಒಪ್ಪೋಣ. ಅವುಗಳನ್ನು ವಶದಲ್ಲಿಟ್ಟುಕೊಂಡಿರುವವರಿಗೆ ಪ್ರಭುತ್ವದ ನಿತ್ಯ ಭಯವಿಲ್ಲವೆ? ಅವು ತಮ್ಮಲ್ಲಿರುವುದು ಗೊತ್ತಾದರೆ ಪ್ರಭುತ್ವದವರು ತಮ್ಮನ್ನು ಶೂಲಕ್ಕೇರಿಸುವುದು ಖಂಡಿತವೆಂಬುದವರಿಗೆ ಗೊತ್ತಿಲ್ಲವೆ? ಆದಕಾರಣ ಅಂತಹವರು ಅವುಗಳನ್ನು ನಾಶಮಾಡಿಯೇ ಮಾಡುವರು.

೧೮೫೬ನೇ ಡಿಸೆಂಬರ್ ಸುಮಾರಿನಲ್ಲೇ ಉತ್ತರಭಾರತದ ಜಿಲ್ಲೆಗಳ ನಾನಾ ಹಳ್ಳಿಗಳಲ್ಲಿ ಚಪಾತಿಗಳ ವಿನಿಯೋಗವಾಗುತ್ತಿತ್ತು. ಚಪಾತಿಗಳು ಬಂಡಾಯದ ಸಂಕೇತ. ಚಪಾತಿಗಳೇ ಜನರಿಗೆ "ಇದಕ್ಕೆ ಸಿದ್ಧರಾಗಿರಿ" ಎಂದು ಸಾರುತ್ತಿದ್ದುವು.[8] ಆಗಿನ ಕಾಲದಲ್ಲೇ ಚಪಾತಿಗಳ ರಹಸ್ಯವೇನೆಂದು ಅಧಿಕಾರಯುತವಾದ ವಿಚಾರಣೆಗಳು ನಡೆದುವೆಂದೂ, ಅವುಗಳಿಗೆ ವಿಶೇಷವಾದ ರಾಜಕೀಯ ಬೆಲೆಯೇನೂ ಇರಲಿಲ್ಲವೆಂಬ ಅಭಿಪ್ರಾಯ ಬಂತೆಂದೂ ತಿಳಿದುಬರುತ್ತದೆ. ಶ್ರೀ ಸುರೇಂದ್ರನಾಥ ಸೇನರಾದರೂ ಈ ಚಪಾತಿಗಳ ಕಥೆಗೆ ಬುಡವೇ ಇಲ್ಲವೆಂದೂ, ಅದೊಂದು ಕಟ್ಟುಕಥೆಯೆಂದೂ ಭಾವಿಸುತ್ತಾರೆ. ಆದರೆ ಮಧ್ಯಭಾರತದ "ಸ್ವಾತಂತ್ರ್ಯ ಚಲನವಲನಗಳ ಇತಿಹಾಸ" ಕಾರರು ಹೀಗೆ ಬರೆದರು.

"ಜನರ ಪಾಲಿಗೆ ಅವು ಒಂದು ಸಂಕೇತ, ಒಂದು ಸಂದೇಶ. ಇದ್ದಕ್ಕಿದ್ದ ಹಾಗೆಯೇ ಭಯಂಕರ ಪ್ರಕರಣವೊಂದು ಪ್ರಾಪ್ತವಾಗು

---

[8] ೧೮೩೦–೩೧ರಲ್ಲಿ, ಮೈಸೂರು ದೇಶದಲ್ಲಾದ ದಂಗೆಯ ಕಾಲದಲ್ಲಿ, ಜನರು ಕೈಯಲ್ಲಿ ಎಲುಬು, ಬೇವಿನಸೊಪ್ಪನ್ನು ಹಿಡಿದು ಹಳ್ಳಿ ಹಳ್ಳಿಗಳಲ್ಲಿ ಸಂಚಾರಮಾಡುತ್ತಿದ್ದರು. ಇದು ದಂಗೆಯ ಸಂಕೇತ. ಈ ಸಂಕೇತ ನೋಡಿದ ಕೂಡಲೆ, ಯಾರೂ ಬಾಯಿಬಿಡದೆಯೇ, ಜನರಿಗೆ 'ದಂಗೆ' ಯೆಂದೂ, ತಮ್ಮ ಕರ್ತವ್ಯವೇನೆಂದೂ, ಅರಿವಾಗುತ್ತಿತ್ತು.

ತ್ತದೆ; ನಿಮ್ಮಮೇಲೆ ಬೀಳುತ್ತದೆ; ಅದಕ್ಕೆ ನೀವೆಲ್ಲ ಸಿದ್ಧವಾಗಿರಿ. ಈ ಸಂಕೇತ ಜನರಿಗೀಸಂದೇಶವನ್ನು ಸಾರುತ್ತದೆ. ಸ್ಕಾಟ್ಲೆಂಡಿನ ಹೈಲೆಂಡರುಗಳಿಗೆ ಉಗ್ರ ಶಿಲುಬೆಯನ್ನು ಕಳುಹಿಸಲಿಲ್ಲವೆ; ಹಾಗೆ ಜನರು ಬಂಡಾಯಕ್ಕೆ ಸಿದ್ಧವಾಗಬೇಕೆಂದು ಹೇಳುವುದೇ ಈ ಚಪಾತಿಗಳ ಹಂಚಿಕೆಯ ಅರ್ಥ." [9]

ಅಂದರೆ ೧೮೫೭ರ ಬಂಡಾಯದ ಹಿಂದೆ ಯೋಚನೆ, ಯೋಜನೆ, ಸಿದ್ಧತೆ, ಇವೆಲ್ಲ ಇದ್ದಹಾಗಾಯಿತು. ಏನೇ ಆಗಲಿ ಇದು ಸಾರ್ವಜನಿಕ ಮತ್ತು ಸರ್ವಜನಪ್ರಿಯ ಬಂಡಾಯವೆಂಬುದರಲ್ಲಿ ಸಂಶಯವೆಳ್ಳಷ್ಟೂ ಇಲ್ಲ. ಇದು ಕೇವಲ ಸಾಂಗ್ರಾಮಿಕ ಪಂಗಡದವರ ದಂಗೆಯೆಂದು ಭಾವಿಸುವುದು ಸರಿಯಲ್ಲ.

"ಸಿಪಾಯಿಗಳ ದಂಗೆಯು ಬಂಡಾಯವಾಯಿತು. ಮೀರತ್ತಿನ ದಂಗೆಗಾರರೆಲ್ಲ ದೆಹಲಿಯ ಮೊಘಲ ಸಮ್ರಾಟನನ್ನು ನಾಯಕ-ಸ್ವಾಮಿಯನ್ನಾಗಿ ಸ್ವೀಕರಿಸಿದರಾಗಿ, ದಂಗೆಗೊಂದು ರಾಜಕೀಯವಾದ ಬಣ್ಣ-ಬೆಲೆ ಬಂತು. ಶ್ರೀಮಂತ ಜಮೀನದಾರರು ಕೆಲವರೂ, ಸಾಮಾನ್ಯ ಜನರು ಕೆಲವರೂ, ಸಹ ಸಮ್ರಾಟರ ನಾಯಕತ್ವಕ್ಕೆ ಅಂಗೀಕಾರ ಕೊಟ್ಟು, ಪ್ರಕಟಿಸಿದರು. ಧರ್ಮದ ಹೆಸರಿನಲ್ಲಿ ಆರಂಭವಾದ ಈ ಹೋರಾಟವು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುಕ್ತಾಯವಾಯಿತು. ಏಕೆಂದರೆ ದಂಗೆಯೆದ್ದವರು ಪರದೇಶೀ ಸರಕಾರವನ್ನು ಮೂಲೋತ್ಪಾಟನ ಮಾಡಬೇಕೆಂದು ಸಂಕಲ್ಪ ಮಾಡಿದರೆಂಬುದರಲ್ಲಿ ಲೇಶವೂ ಸಂಶಯವಿಲ್ಲ. ದೆಹಲಿಯ ಸಮ್ರಾಟನೇ ಹಕ್ಕುದಾರನಾದ ಪ್ರತಿನಿಧಿ; ಹಿಂದೆ ಇದ್ದಂತೆ ಅವನನ್ನೇ ಆ ಸ್ಥಾನದಲ್ಲಿ ಮತ್ತೆ ಸ್ಥಾಪಿಸಬೇಕೆಂಬುದು ಅವರ ಉದ್ದೇಶವಾಗಿತ್ತೆಂಬುದರಲ್ಲಿ ಸಂದೇಹವೇ ಇಲ್ಲ." [10]

---

[9] "They were a symbol and a message telling the people that they were to be prepared for a sudden and dangerous event that would come upon them. Like the fiery cross sent round among the Highlands of Scotland, these chapatis were meant to prepare the minds of the people for a rising."

—*History of Freedom Movement in Madhya Pradesh*, *p. 63.*

[10] "The mutiny became a revolt and assumed a political character when the mutineers of Meerut placed themselves under the King of Delhi and a section of the landed aristocracy and civil population declared in his favour. What began as a fight for religion ended as a war of independence, for there is not the slightest doubt that the rebels wanted to get rid of the alien Government and restore the old order of which the King of Delhi was the rightful representative."

—*Eighteen-Fifty-seven*, by Prof. S. N. Sen, p. 411.

ಹೀಗೆಂದು ಶ್ರೀ ಸುರೇಂದ್ರಸಾಥಸೇನರೇ ಹೇಳಿದ್ದಾರೆ. ಅಂದಮೇಲೆ ಇದು ಕೇವಲ ಸಿಪಾಯಿಗಳ ದಂಗೆಯಲ್ಲ. ಶ್ರೀಮಂತ ಭೂಸ್ವಾಮಿಗಳೂ, ಸಾರ್ವಜನಿಕರೂ, ಎಲ್ಲರೂ ಇದರಲ್ಲಿ ಭಾಗವಹಿಸಿದರು. ಇದಕ್ಕೆ ಅಖಿಲ ಭಾರತದ ಮುದ್ರೆ ಬಿತ್ತು. ಈ ಬಂಡಾಯ ಭಾರತದಲ್ಲೆಲ್ಲ ಹರಡಿತು. ವಿಶಾಲ ಭಾರತದ ನಾನಾ ಕಡೆಗಳಲ್ಲಿ ಇದರ ಸ್ಫೋಟನವಾಯಿತು. ೧೮೫೭ನೆ ಮೇ ೧೦ರಲ್ಲಿ ಪ್ರಾರಂಭವಾದ ಈ ದಂಗೆ, ಈ ಬಂಡಾಯ, ಈ ಸಂಗ್ರಾಮ, ಭಾರತದಲ್ಲಿ ಎರಡು ವರ್ಷಗಳ ಕಾಲ ನಡೆಯಿತು. ಇಷ್ಟು ದೀರ್ಘಕಾಲದಲ್ಲಿ, ಭಾರತದ ಯಾವ ಮೂಲೆಯಲ್ಲೂ ಕೋಮುವಾರು ಘರ್ಷಣವಾಗಲಿಲ್ಲ. ಇಂತಹ ಘರ್ಷಣದ ಉದಾಹರಣೆ ಒಂದಾದರೂ ಇಲ್ಲ. ಭಾರತದಲ್ಲೆಲ್ಲ ಹಿಂದುಗಳಾಗಲಿ, ಮುಸಲ್ಮಾನರಾಗಲಿ, ಈ ಬಂಡಾಯಕ್ಕೆ, ಸಂಗ್ರಾಮಕ್ಕೆ ಒಂದೇ ಬೆಲೆ ಕೊಟ್ಟರು; ಒಂದೇ ದೃಷ್ಟಿಯಿಂದ ಕಂಡರು; ಒಂದೇ ಉದ್ದೇಶದಿಂದ ಹೋರಾಡಿದರು. ಹೆಗಲಿಗೆ ಹೆಗಲು ಕೊಟ್ಟು, ಅಣ್ಣತಮ್ಮಂದಿರಂತೆ, ಸ್ವಾತಂತ್ರ್ಯ ಸಾಧನೆಗಾಗಿ, ಹೋರಾಡಿದರು. ಪರದೇಶಗಳ ವಜ್ರಮುಷ್ಟಿಯಿಂದ ಪಾರಾಗಲು, ದಾಸ್ಯದುಃಖದಿಂದ ಮುಕ್ತರಾಗಲು, ರಕ್ತ ಸುರಿಸಿದರು. ತಮ್ಮ ಸರ್ವಸ್ವವನ್ನೂ ಕಳೆದುಕೊಂಡರು, ಪ್ರಾಣಗಳನ್ನೂ ಅರ್ಪಿಸಿದರು.

---

# ೧. ಸುರಪುರದ ಚಿಕ್ಕವೆಂಕಟಪ್ಪ ನಾಯಕ

ಸುರಪುರ ಸಂಸ್ಥಾನವಂದರೆ ಹತ್ತೊಂಬತ್ತನೆಯ ಶತಮಾನದ ಇತಿಹಾಸ ಪ್ರಸಿದ್ಧವಾದ ರಾಜ್ಯ. ಸುರಪುರವೀಗ ಗುಲ್ಬರ್ಗಾ ಜಿಲ್ಲೆಯಲ್ಲಿದೆ. ವಿಜಯ ನಗರ ಸಾಮ್ರಾಜ್ಯಾನಂತರ ಬೇಡರಬೀಡು, ವೀರರನಾಡೆಂದು ಹೆಸರು ಪಡೆದು, ಹಿಂದೂ ಧರ್ಮ ಸಂವರ್ಧನಕ್ಕೂ, ಆರ್ಯ ಸಂಸ್ಕೃತಿಯ ಸಂರಕ್ಷಣೆಗೂ, ವಿದ್ವಜ್ಜನರ ಆಶ್ರಯಕ್ಕೂ, ಕಲಾವಿದರ ಸ್ಫೂರ್ತಿ ಪೋಷಣೆಗೂ, ಮೂಲಸ್ಥಾನ ವೆನಿಸಿತ್ತು. ಈ ಸಂಸ್ಥಾನದ ಜನರು ಸ್ವಾತಂತ್ರ್ಯವೊಂದನ್ನಲ್ಲದೆ ಮತ್ತೇನನ್ನೂ ಬೇಡರು! ಸ್ವತಂತ್ರ ಜೀವನಕ್ಕೆ ಸಂಚಕಾರ ಬಂದ ಅನೇಕ ಸಂಕಟ, ಸಂದಿಗ್ಧ ಸಮಯಗಳಲ್ಲಿ, ಶತ್ರುಗಳನ್ನೆದುರಿಸಿ, ರಾಜ್ಯದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಒಂದು ಕಡೆ ಹೈದರಾಬಾದಿನ ನಿಜಾಮು, ಇನ್ನೊಂದು ಕಡೆ ಬಿಜಾಪುರದ ಅದಿಲ್‌ಷಾ, ಇವರಿಬ್ಬರೂ ಸೆಣಸಾಡುತ್ತಿದ್ದಾಗ, ಸುರಪುರದವರು ಯಾರ ಪಕ್ಷವನ್ನೂ ವಹಿಸದೆ, ಯಾರಿಗೂ ತಲೆಬಾಗದೆ, ಭದ್ರ, ಸ್ವತಂತ್ರ, ಜೀವನ ನಡೆಸಿಕೊಂಡು ಬಂದಿದ್ದಾರೆ. ಮೊಘಲ ಪಾದಷಹಾ ಔರಂಗಜೇಬ ದಕ್ಷಿಣ ದೇಶಕ್ಕೆ ದಂಡೆತ್ತಿಬಂದ; ಅದಿಲ್‌ಷಾಹಿಗಳ ಸೊಕ್ಕನ್ನು ಅಡಗಿಸಲು ಹವಣಿಸಿದ. ಆಗ ಅವನು ಸುರಪುರದ ಬೇಡರ ಸಹಾಯವನ್ನು ಬೇಡ ಬೇಕಾಯಿತು. ಸುರಪುರದ ನಾಯಕರ ಅರಮನೆಗೆ ಬಂದು, ಅವರ ಸಹಾಯ ಪಡೆದು, ಪಾದಷಹಾ ಬಿಜಾಪುರವನ್ನು ಜಯಿಸಬೇಕಾಯಿತು. ಇದು ಸುರಪುರದ ಕೀರ್ತಿ. ಭಾರತ ದಲ್ಲಿ ಸಾಮ್ರಾಜ್ಯ ಸ್ಥಾಪಿಸಲು ಬಂದ ಬ್ರಿಟಿಷರಿಗೆ ಇದು ಚೆನ್ನಾಗಿ ಗೊತ್ತು.

ಇಂತಹ ಬೇಡರ ನಾಯಕರು ಸುರಪುರದರಸರು. ಶೌರ್ಯ ಪರಾಕ್ರಮಗಳಲ್ಲಿ, ಸ್ವಾತಂತ್ರ್ಯ ಪ್ರೇಮದಲ್ಲಿ, ಪ್ರಜೆಗಳು ಪ್ರಭುಗಳನ್ನೂ, ಪ್ರಭುಗಳು ಪ್ರಜೆಗಳನ್ನೂ, ಮೀರಿಸುತ್ತಿದ್ದರು. [11]ಸಂಗೊಳ್ಳಿ ರಾಯಿನಾಯಿಕ ಸುರಪುರಕ್ಕೆ ಹೋಗಿ ವೆಂಕಟಪ್ಪ ನಾಯಕನ ಮುಂದೆ ತನ್ನ ಪರಾಕ್ರಮ ತೋರಿಸಲು, ನಾಯಕ ಸಂತೋಷಪಟ್ಟು 'ನೀನು ಏನು ಬೇಕಾದರೂ ಬೇಡು ಕೊಡುತ್ತೇನೆ' ಅಂದ. ಆಗ ರಾಯಿನಾಯಿಕ "ಮತ್ತೇನೂ ಬೇಡ; ಮುನ್ನೂರು ಬೇಡರನ್ನು ಕೊಡಿ. ಬ್ರಿಟಿಷರ ವಿರುದ್ಧ ಬಂಡೆಬ್ಬಿಸುತ್ತೇನೆ" ಎಂಬದಾಗಿ ಉತ್ತರವಿತ್ತ. ಈ ಮಾತಿಗೆ ನಾಯಕ ಮೆಚ್ಚಿ, ತಲೆದೂಗಿ, ಬೇಡರ ಸೈನ್ಯಕೊಟ್ಟು ಕಳುಹಿಸಿದ. ಇಂತಹ ಮನೋಧರ್ಮದ ವೆಂಕಟಪ್ಪನಾಯಕನ ಮಗ ಚಿಕ್ಕವೆಂಕಟಪ್ಪನಾಯಕ. ಅವನು ಹುಟ್ಟಿ ಬೆಳೆದ ಕಾಲ, ಅವನು ಗದ್ದುಗೆಯೇರಿದ ಕಾಲ, ಭಾರತದ ಇತಿಹಾಸದೊಂದು ಪರ್ವಕಾಲ. ಬ್ರಿಟಿಷರು ಭಾರತೀಯರ ಸ್ವಾತಂತ್ರ್ಯ ಅಪಹಾರಮಾಡಿ, ಸಾಮ್ರಾಜ್ಯ ಸ್ಥಾಪಿಸಿದ ಕಾಲ. ಭಾರತೀಯರು ಹಿಂದು, ಮುಸ್ಲಿಂ, ಜಾತಿಮತ ಭೇದ ಬಿಟ್ಟು, ಐಕ್ಯತೆ ಮತ್ತು ಐಕಮತ್ಯದಿಂದ ಭಾರತದ ಸ್ವಾತಂತ್ರ್ಯಕ್ಕಾಗಿ ಪಣತೊಟ್ಟಕಾಲ. ೧೮೫೭ ರ ಕ್ರಾಂತಿ ಸಿಪಾಯಿಗಳ ದಂಗೆಯಲ್ಲ; ಜಹಗೀರದಾರರ ಸ್ವಾರ್ಥ ಸಾಧನೆಯಲ್ಲ; ಪದಚ್ಯುತರಾದ ಅರಸುಗಣದವರ ನಿರಂಕುಶ ಪ್ರಭುತ್ವ ಪುನರುದ್ಧಾರ ಪ್ರಯತ್ನವಂತೂ ಅಲ್ಲವೇ ಅಲ್ಲ. ಭಾರತೀಯರ ಶುದ್ಧ ಸ್ವಾತಂತ್ರ್ಯ ಸಾಧನೆಯ

[11] ಬಸವ ಕವಿ ಬರೆದ 'ಸಂಗೊಳ್ಳಿ ರಾಯನಾಯಕನ ಬಂಡಾಯ' ಎಂಬ ಲಾವಣಿ.

ಪ್ರಪ್ರಥಮ ಪ್ರಯತ್ನ! ಈ ದೃಷ್ಟಿಯಿಂದ ಇದು ಮಹಾಕ್ರಾಂತಿ! ಇಂತಹ ಕ್ರಾಂತಿಯ ಕೂಸು ಚಿಕ್ಕವೆಂಕಟಪ್ಪ ನಾಯಕ. ೧೮೫೭ರ ವೇಳೆಗೆ ೨೩-೨೪ ವರ್ಷದ ತರುಣ; ಧಮನಿಗಳಲ್ಲಿ ಬಿಸಿರಕ್ತ ಕುಣಿವ ತರುಣ. ಬಾಲ್ಯದಿಂದಲೂ ಇವನು ಬ್ರಿಟಿಷರ ವೈರವನ್ನು ಬೆಳೆಸಿಕೊಂಡು ಬಂದನೆಂದು ಭಾವಿಸಬಹುದು. ಈ ವೈರಭಾವದ ಮೂಲ ಅವನ ಸ್ವಾತಂತ್ರ್ಯ ಪ್ರೇಮ. ಮೆಡೋಸ್ ಟೆಯಿಲರನ ಕೈಕೂಸಾಗಿ ಇವನು ಬೆಳೆದರೂ, ಅಂದಿನಿಂದ ಅವನು ಕಣ್ಣುಮುಚ್ಚುವವರೆಗೆ ಟೆಯಿಲರನ್ನು 'ಅಪ್ಪಾ' ಎಂದೇ ಸಂಬೋಧಿಸುತ್ತಿದ್ದರೂ, ಬ್ರಿಟಿಷರ ಪರಮ ವೈರಿಯಾಗಿದ್ದ. ಅವನು ಆಗರ್ಭ ಸ್ವಾತಂತ್ರ್ಯಪ್ರಿಯ.

ಬ್ರಿಟಿಷ್ ಆಡಳಿತಗಾರರ ಕುಟಿಲೋಪಾಯಗಳ ಫಲವಾಗಿ ಸುರಪುರ ಸಂಸ್ಥಾನದ ೫೨ ಲಕ್ಷ ರೂಪಾಯಿಗಳ ವರಮಾನದ ಸೀಮೆ, ನಾಯಕರ ಕೈಬಿಟ್ಟು ಹೋಯಿತು. ಅನ್ಯಾಯದಿಂದ ಅಪಹರಿಸಿದ ಈ ಸೀಮೆಯನ್ನು ಮತ್ತೆ ಪಡೆಯ ಬೇಕೆಂಬ ಆಶಯವೂ ತರುಣ ವೆಂಕಟಪ್ಪನಾಯಕನಿಗಿತ್ತು. ೧೮೫೭ ರ ಕ್ರಾಂತಿಯೂ ತಲೆಹಾಕಿತು. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪಾಂಚಜನ್ಯ ಮೊಳಗಿತು. ಅದಕ್ಕೆ ತರುಣ ವೆಂಕಟಪ್ಪನಾಯಕ ಕಿವಿಗೊಟ್ಟ. ದೇಶದ ಸ್ವಾತಂತ್ರ್ಯಕ್ಕಾಗಿ ಸರ್ವಾರ್ಪಣಮಾಡಲು—ಅದೇಕೆ—ಪ್ರಾಣವನ್ನೇ ಅರ್ಪಿಸಲು ಸಿದ್ಧನಾದ.

ಸುರಪುರವು ದೇಶಾಭಿಮಾನಿಗಳ ಬೀಡಾಯಿತು; ಸ್ವಾತಂತ್ರ್ಯ ಪ್ರೇಮಿಗಳ ಸಮರ ಶಿಬಿರವಾಯಿತು; ಬ್ರಿಟಿಷರ ಕಪಿಮುಷ್ಟಿಯನ್ನು ಸಡಲಿಸುವ, ಬ್ರಿಟಿಷ್ ಸಾಮ್ರಾಜ್ಯವನ್ನುರುಳಿಸುವ ನಾನಾ ಯೋಚನೆ, ಯೋಜನೆಗಳ, ರಹಸ್ಯಸ್ಥಾನ ವಾಯಿತು. ಚಿಕ್ಕವೆಂಕಟಪ್ಪನಾಯಕ ನಾನಾ ಸಾಹೇಬನ ವಕೀಲರನ್ನೂ, ರಾಯಭಾರಿಗಳನ್ನೂ, ಬರಮಾಡಿಕೊಂಡು ಮಂತ್ರಾಲೋಚನೆ ನಡೆಸಿದ. ತಾನೂ ಅವನಲ್ಲಿಗೆ ರಾಯಭಾರಿಗಳನ್ನು ಕಳುಹಿಸಿದ; ಅವನಿಗೆ ಪತ್ರಗಳನ್ನು ಬರೆದ. ವೆಂಕಟಪ್ಪನಾಯಕನ ಮೇಲೆ ಕಣ್ಣಿಟ್ಟಿದ್ದ, ಅವನ ಚಲನವಲನಗಳನ್ನು ಎಚ್ಚರಿಕೆ ಯಿಂದ ಗಮನಿಸುತ್ತಿದ್ದ ಬ್ರಿಟಿಷ್ ಅಧಿಕಾರಿಗಳ ಪತ್ರವ್ಯವಹಾರದಿಂದ ಇದು ಸ್ಪಷ್ಟವಾಗುತ್ತದೆ. ೨೪-೧೨-೧೮೫೭ ರಂದು ಎ. ಆರ್. ಥಾರ್ನಹಿಲ್, ಕ್ಯಾಪ್ಟನ್ ಕ್ಯಾಂಬೆಲ್‌ಗೆ ಬರೆದ ಪತ್ರದಲ್ಲಿ ಹೀಗಿದೆ:

> "ನಾನಾ ಸುಂಕೇಶ್ವರನೆಂಬ ಬ್ರಾಹ್ಮಣನೊಬ್ಬನನ್ನು ಇತ್ತೀಚೆಗೆ ರಾಜನು ತನ್ನ ಪ್ರತಿನಿಧಿಯನ್ನಾಗಿ ನಾನಾ ಸಾಹೇಬನ ಬಳಿಗೆ ಕಳುಹಿಸಿದ್ದಾನೆಂದು ಸಾಮಾನ್ಯವಾಗಿ ನಂಬಲಾಗಿದೆ. ಈ ವಿಚಾರ ಕುರಿತು ರಾಜನನ್ನು ಖಂಡಿತವಾಗಿ ಪ್ರಶ್ನೆಮಾಡಬೇಕು. ಆ ಬ್ರಾಹ್ಮಣನನ್ನು ಕರೆಸಿ, ಎದುರಿಗೆ ನಿಲ್ಲಿಸಬೇಕೆಂದು ಆಜ್ಞೆಮಾಡ ಬೇಕು; ಇಲ್ಲವೆ ಆ ಬ್ರಾಹ್ಮಣ ಎಲ್ಲಿದ್ದಾನೆಂಬುದನ್ನು ನಿಮಗೆ ಸಮಾಧಾನವಾಗುವಂತೆ ವಿವರಿಸಿ, ಸ್ಥಾಪಿಸಬೇಕು." [12]

---

[12] "It is very generally believed that a Brahmin by name Nana Sumkeshwar has recently been deputed by the Rajah as an emissary to Nana Saheb and the Rajah should be strictly questioned on this point and required to produce the Brahaman or prove to your satisfaction where he is."

—*The Freedom Struggle in Hyderabad, Vol. II, p.* 89.

ಉತ್ತರ ಭಾರತದ ಕ್ರಾಂತಿ ನಾಯಕರೊಂದಿಗೆ ನಿಕಟ ಸಂಪರ್ಕವನ್ನಿಟ್ಟು ಕೊಳ್ಳುವುದು ಮಾತ್ರವಲ್ಲ; ಸುರಪುರದ ನೆರೆಹೊರೆಯವರನ್ನು, ಅವರ ಮುಂಖಡರನ್ನು, ಒಂದುಗೂಡಿಸುವ ಪ್ರಯತ್ನದಲ್ಲೂ ತರುಣ ವೆಂಕಟಪ್ಪನಾಯಕ ಆಸಕ್ತನಾದ. ಜಂಬಗಿಯ ದೇಶಮುಖಿ ಬಸಲಿಂಗಪ್ಪನು ನಾಯಕನಿಗೆ ನೆರವಾದ; ನಾಯಕನಿಗೆ ಬೇಕಾದ ಮದ್ದು, ಗುಂಡು ಮೊದಲಾದ ಸಾಮಗ್ರಿಗಳನ್ನು ಶೇಖರಿಸಿದ. ನಾನಾ ಸಾಹೇಬನು ಕ್ರಾಂತಿಯ ಸಂದೇಶ ನೀಡಲು ಸೊಲಾಪುರಕ್ಕೆ ಬರುವನೆಂದು ಸಾರಿದ. ಆದರೆ ಇವರ ರಹಸ್ಯಾಲೋಚನೆಗಳು ಕಾರ್ಯರೂಪಕ್ಕೆ ಬರುವ ಮೊದಲೇ ಸುದ್ದಿಯು ಸೊಲಾಪುರದ ಜಿಲ್ಲಾಧಿಕಾರಿಗೆ ತಿಳಿದು ಬಂತು. ಅವನು ತಕ್ಷಣ ತಕ್ಕ ಕಾರ್ಯಕ್ರಮಗಳನ್ನು ಕೈಕೊಂಡ. ದೇಶಮುಖಿ ಬಸಲಿಂಗಪ್ಪ ನನ್ನೂ, ಅವನ ಮಗನನ್ನೂ ಸೆರೆಹಿಡಿದ. ಅವರಿಗೆ ಸೇರಿದ ಕೊಟ್ನಾಲ್ ಕೋಟೆಯನ್ನು ನೆಲಸಮ ಮಾಡಿದ. ಸುತ್ತಮುತ್ತಣ ಜಹಗೀರದಾರರ ಮೇಲೆಲ್ಲ ಕಾಪಿನ ಭಟರನ್ನಿಟ್ಟ.

ಚಿಕ್ಕವೆಂಕಟಪ್ಪನಾಯಕ ಹಾಕಿದ ಹಂಚಿಕೆ, ಕೈಕೊಂಡ ಕೆಲಸ, ಫಲಿಸಲಿಲ್ಲ. ನಾಯಕನು ಎದೆಗುಂದಲಿಲ್ಲ. 'ಸೋಲು ಗೆಲುವಿಗೆ ಹೆದ್ದಾರಿ' ಎಂಬುದವನ ನಂಬಿಕೆ. ಇಮ್ಮಡಿ ಶ್ರದ್ಧೋತ್ಸಾಹದಿಂದ ಕ್ರಾಂತಿ ಯಜ್ಞದಲ್ಲಿ ಮಗ್ನನಾದ. ಉತ್ತರ ಭಾರತದಲ್ಲಿ ದೇಶೀಯ ಸೈನ್ಯದಳಗಳಿದ್ದ ಕಡೆಗಳಲ್ಲೆಲ್ಲ ಅಶಾಂತಿಯ ಬೀಜ ಬಿತ್ತುವ, ಕ್ರಾಂತಿಯ ಸಂದೇಶ ಹರಡುವ, ವ್ಯವಸ್ಥೆಯಾಗಿತ್ತು. ಹಾಗೆಯೇ ದಕ್ಷಿಣ ಭಾರತದಲ್ಲೂ ಏರ್ಪಾಡಾಗಿತ್ತು. ಕೊಲ್ಹಾಪುರದಲ್ಲಿ ೨೭ನೇ ನಂಬರು ದಳ, ಧಾರವಾಡದಲ್ಲಿ ೨೮ನೇ ನಂಬರು ದಳ, ಬೆಳಗಾಂವಿಯಲ್ಲಿ ೨೯ನೇ ನಂಬರು ದಳಗಳಿದ್ದುವು. ಆಗಸ್ಟ್ ೧೦ ರಂದು, ಏಕಕಾಲದಲ್ಲಿ, ಎಲ್ಲ ಕಡೆಗಳಲ್ಲೂ, ಕ್ರಾಂತಿಯ ಕಹಳೆಯಾಗತಕ್ಕದ್ದೆಂದು ನಿಶ್ಚಯವಾಗಿತ್ತು. ಬೆಳಗಾಂವಿಯ ೨೯ನೇ ನಂಬರು ದಳದಲ್ಲಿ ಕ್ರಾಂತಿಯ ಬೀಜಾವಾಪಕ್ಕಾಗಿ, ದಳದವರನ್ನು ದಂಗೆ ಎಬ್ಬಿಸುವುದಕ್ಕಾಗಿ, ಸುರಪುರದ ನಾಯಕ ಮಹೀಪಾಲ್‌ಸಿಂಗ್ ಎಂಬ ಗೂಢಚಾರನನ್ನು ಕಳುಹಿಸಿದ. ಮಹೀಪಾಲ್‌ಸಿಂಗನು ಬಂದ; ತನ್ನ ಕೆಲಸವನ್ನಾರಂಭಿಸಿದ. ಬ್ರಿಟಿಷ್ ಸೈನಿಕರವನನ್ನು ಗುರುತಿಸಿ, ಬಂಧಿಸಿದರು. ಬಂದಿಯನ್ನು ವಿಚಾರಣೆಗೆ ಗುರಿಪಡಿಸಿದರು. ಆ ವಿಚಾರಣೆಯಿಂದ ಸುರಪುರದ ವೆಂಕಟಪ್ಪನಾಯಕನು ಆ ಪಿತೂರಿಗೆ ಮೂಲ ಕಾರಣನೆಂದು ಗೊತ್ತಾಯಿತು. ಬ್ರಿಟಿಷ್ ಅಧಿಕಾರಿ ಟೇಲರ್ ಲಿಂಗ್ಸುಗೂರಿನಿಂದ ಸರಕಾರಕ್ಕೊಂದು ವರದಿ ಕಳುಹಿಸಿದ. ಅದು ಹೀಗೆ ಆರಂಭವಾಗುತ್ತದೆ:

> "೭ನೇ ತಾರೀಖಿನಲ್ಲಿ ಬರೆದ ೧೦೬೪ನೆ ನಂಬರಿನ ತಮ್ಮ ಪತ್ರಕ್ಕುತ್ತರವಿದು. ಇತ್ತೀಚೆಗೆ ಬೆಳಗಾಂವಿಯಲ್ಲಿ ಮರಣದಂಡನೆಗೆ ಗುರಿಯಾದ ಮಹೀಪಾಲಸಿಂಗನ ಹೇಳಿಕೆಯ ಪ್ರತಿಯನ್ನು ಕಳುಹಿಸುತ್ತಾ ನಾನೀ ಅಂಶವನ್ನು ಶ್ರುತಪಡಿಸುತ್ತೇನೆ. ನಾನು ವಿಚಾರಮಾಡಿದ್ದರಲ್ಲಿ ಮಹೀಪಾಲ ಸಿಂಗನನ್ನು ಸುರಪುರದ ರಾಜನೇ ಆಜ್ಞೆಮಾಡಿ ಬೆಳಗಾಂವಿಗೆ ಕಳುಹಿಸಿರದೇ ಹೋದರೂ, ಅವನ

ಗಮನಕ್ಕೆ ಬಂದೇ ಈ ಕಾರ್ಯ ನಡೆದಿರಬೇಕೆಂದು ನಾನು ನಂಬಬೇಕಾಗಿದೆ." 13

೮-೨-೧೮೫೮ ರಲ್ಲಿ ಬೆಳಗಾಂವಿಯ ರಾಜಕೀಯ ಪ್ರತಿನಿಧಿ ಸರಕಾರಕ್ಕೊಂದು ವರದಿ ಕಳುಹಿಸಿದ. ಆದರಲ್ಲಿ ಮಹೀಪಾಲಸಿಂಗನ ಸಂಗಡಿಗರಾದ ಚೇದ್‌ಸಿಂಗ್, ಲಕ್ಷ್ಮಣಪ್ರಸಾದ್ ಎಂಬವರನ್ನು ಬಂಧಿಸಿದ ವಿಷಯ ಪ್ರಸ್ತಾಪಮಾಡಿದ್ದಾನೆ. ಇವರಿಬ್ಬರೂ ಜಮುಖಂಡಿ ರಾಜನಿಂದ ಪ್ರೋತ್ಸಾಹಗೊಂಡವರೆಂದೂ ಸೂಚಿಸಿದ್ದಾನೆ. ಜಮುಖಂಡಿ ರಾಜನಿಗೂ, ಸುರಪುರದ ವೆಂಕಟಪ್ಪನಾಯಕನಿಗೂ ನಿಕಟ ಸಂಪರ್ಕವಿತ್ತೆಂಬುದಕ್ಕೆ ಅಬ್ಬದಿಯೊಂದರೆಂಬ ಬ್ರಾಹ್ಮಣ ಅಧಿಕಾರಿಯ ಸಾಕ್ಷ್ಯವೂ ಇದೆ. ಜಮುಖಂಡಿಯ ರಾಜನು ಬ್ರಿಟಿಷರ ವಿರುದ್ಧ ಪಿತೂರಿಯಲ್ಲಿ ಪಾತ್ರ ವಹಿಸಿದ್ದನೆಂಬ ಆಪಾದನೆಯಮೇಲೆ ಬ್ರಿಟಿಷರು ಅವನನ್ನು ಬೆಳಗಾಂವಿಯಲ್ಲಿ ಬಂಧನದಲ್ಲಿಟ್ಟರು. ಜಮುಖಂಡಿಯ ಕೋಟೆಯನ್ನು ವಶಪಡಿಸಿಕೊಂಡರು.

ಇಷ್ಟಾದರೂ ವೆಂಕಟಪ್ಪನಾಯಕ ಬ್ರಿಟಿಷರ ಕೈಗೆ ಸಿಗಲಿಲ್ಲ. ಬೆಳಗಾಂವಿಯ ಕ್ರಾಂತಿಜ್ವಾಲೆ ಬತ್ತಿಹೋಯಿತು ನಿಜ. ಆದರೆ ಸುರಪುರವಿನ್ನೂ ಸ್ವತಂತ್ರವಾಗಿಯೇ ಉಳಿದಿತ್ತು. ವೆಂಕಟಪ್ಪನಾಯಕ ಬ್ರಿಟಿಷರ ಕೈಗೆ ನಿಲುಕದ ಹಕ್ಕಿಯಾಗಿದ್ದ. ಅವನ ಪ್ರಯತ್ನಗಳು ಭಗ್ನವಾದರೂ ಅವನು ಧೃತಿಗೆಡಲಿಲ್ಲ. ಸುರಪುರದ ಬೇಡರನ್ನು ಹುರಿದುಂಬಿಸಿ, ಅವರನೆಲ್ಲ ಶಿಸ್ತಿನ ಸಿಪಾಯಿಗಳನ್ನಾಗಿ ಮಾರ್ಪಡಿಸಿ, ಅವರ ಜತೆಗೆ ಅರಬರನ್ನೂ, ರೋಹಿಲರನ್ನೂ ಸೇರಿಸಿ, ಸೈನ್ಯ ಕಟ್ಟಿದ.

೨೮-೧೨-೧೮೫೭ರಲ್ಲಿ ಥಾರ್ನಹಿಲ್, ಕ್ಯಾಂಬೆಲ್‌ಗೆ ಬರೆದ ಪತ್ರದಿಂದ ಸುರಪುರ ಪರಿಸ್ಥಿತಿಯೇನಾಗಿತ್ತೆಂಬುದು ವ್ಯಕ್ತವಾಗುತ್ತದೆ:

"ಸುರಪುರದಿಂದ ಆಗಿಂದಾಗ್ಗೆ ಅತೃಪ್ತಿಕರ ಸ್ವಭಾವದ ವರದಿಗಳನೇಕ ರೆಸಿಡೆಂಟಿಗೆ ಮುಟ್ಟಿವೆ. ಅವುಗಳಿಂದ ರಾಜನ ಸಂಸ್ಥಾನದ ಆಡಳಿತ ವಿತರಣೆ ಕುರಿತೂ, ಬೇಡರ ಪ್ರಜೆಗಳು ದಂಗೆಯನ್ನೆಬ್ಬಿಸುವ ಉದ್ದಿಶ್ಯವುಳ್ಳವರಾಗಿದ್ದಾರೆಂದೂ, ಆ ಸಂಬಂಧವಾಗಿ ನೆರೆಹೊರೆ ಜಿಲ್ಲೆಗಳಲ್ಲಿ ಮೇಲಿಂದ ಮೇಲೆ ಭಯಂಕ ಭೇರೀರವವಾಗುತ್ತಿರುವುದನ್ನು ಕುರಿತೂ, ವಿಷಯಗಳು ಗೊತ್ತಾಗಿವೆ. ನೀವು ತಕ್ಷಣ ಸುರಪುರಕ್ಕೆ ಹೋಗತಕ್ಕದ್ದೆಂದೂ, ಸ್ಥಳದ ವಿದ್ಯಮಾನಗಳನ್ನು ಕುರಿತು ವಿಚಾರಣೆ ನಡೆಸತಕ್ಕದ್ದೆಂದೂ, ದೇಶದ ಪ್ರಕೃತ ಪರಿಸ್ಥಿತಿ ಕುರಿತು ತಮ್ಮ ಶಕ್ತ್ಯಾನುಸಾರ ಪೂರ್ಣ ವರದಿಯನ್ನು ಕಳುಹಿಸಲು ತಮ್ಮನ್ನು

---

13 "In reply to your letter No. 1064 of 2nd current forwarding for report copy of a statement of one Mypal Sing lately executed at Belgaum, I have the honour to state that my enquiries lead to the belief that the person was sent to Belgaum with cognizance if not by the orders of the Rajah of Shorapur."

—*The Freedom Struggle in Hyderabad, Vol. II*, p. 86.

ಪ್ರಾರ್ಥಿಸಬೇಕೆಂದೂ ನಾನು ಕರ್ನಲ್ ಡೇವಿಡ್‌ಸನ್‌ರವರಿಂದ ಆಜ್ಞಪ್ತನಾಗಿದ್ದೇನೆ.” 14

ಹೈದರಾಬಾದಿನ ಸಾಲಾರ್ ಜಂಗ್ ಕ್ಯಾಪ್ಟನ್ ಥಾರ್ನ್‌ಹಿಲ್‌ಗೆ ೩-೨-೧೮೫೮ರಲ್ಲಿ ಬರೆದ ಪತ್ರದಲ್ಲಿ:

“ನಾನು ನೇಮಿಸಿರುವ ಗೂಢಚಾರರ ಮೂಲಕ ಐದು ದಿನಗಳ ಹಿಂದೆ ಸುರಪುರದರಸನು ಅರಬರನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಳ್ಳುವ ಉದ್ದಿಶ್ಯದಿಂದ ತನ್ನ ಜನರನ್ನು ಹೈದರಾಬಾದಿಗೆ ಕಳುಹಿಸಿದ್ದಾನೆಂಬ ಸುದ್ದಿ ಬಂತು. ಅರಬ ಜಮಾದಾರರಿಂದ ಈ ಸುದ್ದಿಯನ್ನು ಖಚಿತಮಾಡಿಕೊಂಡು ಬರೆಯೋಣವೆಂದು ತಡಮಾಡಿದೆ . . ” 15

ಮುಂತಾಗಿ ಹೇಳಿದ್ದಾನೆ.

ರೆಸಿಡೆಂಟ್ ಡೇವಿಡ್‌ಸನ್ನನೂ ಇಂಡಿಯಾ ಸರಕಾರಕ್ಕೆ ದೀರ್ಘವಾದ ವರದಿಯನ್ನು ಕಳುಹಿಸುತ್ತಾ:

“ಸಂಬಳದ ಸೈನಿಕರು ಬೇರೆ ಬೇರೆ ಗುಂಪುಗುಂಪುಗಳಾಗಿ ಸುರಪುರ ಪ್ರವೇಶಮಾಡುತ್ತಿದ್ದರೆಂದು ನಂಬಲು ಆಗ ಕ್ಯಾಂಬೆಲ್‌ಗೆ ಅನೇಕ ಕಾರಣಗಳಿದ್ದುವು . . . . . . . ” 16

---

[14] "So many reports of an unsatisfactory nature have from time to time reached the Resident regarding the present state of the Shorapur country, and the proceedings of the Rajah in his management of his Sumusthan and such frequent alarms have been spread in the neighbouring districts owing to the alleged intentions of the Bedar population to rise in revolt that I am desired by Col. Davidson to request that you will at once proceed to Shorapur with a view to instituting an enquiry on the spot and reporting as full as may be in your power on the present conditions of the country both as regards the conduct of the Rajah himself and the feelings and intentions of the people in general."

—*The Freedom Struggle in Hyderabad, Vol. II, p. 88.*

[15] "I have received information about five days ago from the men I have employed to procure intelligence that the Raja of Shorapur has sent persons to this City to entertain Arabs for his service . . . . . "

—*Ibid, p. 93.*

[16] "At this time Cap[illegible]pbell had many reasons for believing that mercenary soldiers were entering Shorapur in small detached parties, . . . . . . "

—*The Freedom Struggle in Hyderabad, Vol. II, p. 98.*

ಎಂಬುದಾಗಿ ಹೇಳುವುದು ಮಾತ್ರವಲ್ಲದೆ:

"ರಾಜನಾಗಲಿ, ಅವನ ಸೈನಿಕರಾಗಲಿ ನಮ್ಮ ಸೈನಿಕರಮೇಲೆ ಬಿದ್ದು ಯುದ್ಧವನ್ನಾರಂಭಿಸುವ ಕಾರ್ಯಗಳಲ್ಲಿ ತೊಡಗದೆ ಇದ್ದರೂ ಅವನು ಸಂಬಳದ ಸೈನಿಕರನ್ನು ಕೂಡಿಸಿ, ಬ್ರಿಟಿಷ್ ಸರಕಾರ ವೈರ ಕಾರ್ಯಗಳನ್ನು ಕೈಕೊಳ್ಳುವ ಉದ್ದಿಶ್ಯ ಉಳ್ಳವನಾಗಿದ್ದನೆಂಬ ಆಪಾದನೆಯಂತೂ ಖಂಡಿತವಾಗಿ ರಾಜನ ಮೇಲೆ ಉರ್ಜಿತ ವಾಗುತ್ತದೆ. ಇವೆರಡೂ ಸಂದರ್ಭಗಳಲ್ಲೂ ಏನು ಮಾಡಬೇಕೆಂ ಬುದನ್ನು ಕುರಿತು ನಿರ್ಧರಿಸಬೇಕಾದುದು ಅವಶ್ಯಕವಾಗಿದೆ." [17]

ಎಂದು ಬರೆದಿದ್ದಾನೆ. ಕಡೆಗೆ ತನ್ನ ನಂಬಿಕೆಯನ್ನೂ, ಮನೋ ನಿರ್ಧಾರ ವನ್ನೂ ಈ ವಿಧವಾಗಿ ಸೂಚಿಸಿದ್ದಾನೆ:

"ಮೇಲೆ ವಿವರಿಸಿದ ವಿದ್ಯಮಾನಗಳಿಂದ ಸುರಪುರದ ರಾಜನ ನಡತೆ ಕುರಿತು ಕ್ಷಮಾರ್ಹವಾದಂಶವೊಂದೂ ನನಗೆ ಕಂಡುಬರುವು ದಿಲ್ಲ. ನಮ್ಮ ಪ್ರಭುತ್ವ ವಿರುದ್ಧನಿಂತು, ವೈರಕಟ್ಟಿ, ಸೈನಿಕರನ್ನು ಸೇರಿಸುತ್ತಿದ್ದುದು ಕಂಡುಬಂತಾಗಿ ಅವನನ್ನು ಬಂಡಾಯಗಾರನೆಂದು ಭಾವಿಸಿ, ಅಂತೆಯೇ ಅವನನ್ನು ದಂಡಿಸತಕ್ಕದ್ದೆಂದೂ, ಅವನನ್ನು ಹಿಡಿದು, ಸೆರೆಮನೆಗೆ ಹಾಕಿ, ಸುರಪುರದಿಂದ ಹೊರಡಿಸತಕ್ಕದ್ದೆಂದೂ, ಅವನ ಸಂಸ್ಥಾನವನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದೆಂದೂ, ನಾನು ಭಾವಿಸುತ್ತೇನೆ.

"ರಾಜನು ತನ್ನ ಅನುಚರರೊಡನೆ, ಸಂಬಳದ ಸೈನಿಕರೊಡನೆ, ಯುದ್ಧಾರಂಭ ಕಾರ್ಯಗಳನ್ನೇ ಆರಂಭಿಸಿದನಾದರೆ, ಮೇಲೆ ಸೂಚಿ ಸಿದ ಮಾರ್ಗ ಹಿಡಿಯದೆ ಅನ್ಯಥಾ ವಿಧಿಯೇ ಇಲ್ಲವೆಂಬುದು ಸ್ಪಷ್ಟ, ಅಗತ್ಯ.

"ಹಿಂದುಸ್ಥಾನದಲ್ಲಿ ನಮ್ಮ ಸರಕಾರ ವಿರುದ್ಧ ದಂಗೆ ಎದ್ದಂದಿ ನಿಂದ ಸುರಪುರದರಸನು ಬ್ರಿಟಿಷ್ ಸರಕಾರ ವೈರ, ವಿರುದ್ಧ ಸಂಬಂಧ ವಾದ ವದಂತಿಗಳು ಸದಾ ನನ್ನ ಕಿವಿಗೆ ಬಿದ್ದಿವೆ. ಆದರೆ ಇಂದಿನ ವರೆಗೆ ಅರಸನಿಗೆ ಬುದ್ಧಿಹೇಳಿ, ಹದ್ದಿನಲ್ಲಿರಿಸುವ ಕ್ರಮನಡೆಸುವ ಧೈರ್ಯ ನನಗೆ ಬರಲಿಲ್ಲ. ಅವನು ಮೊದಲಿನಿಂದಲೂ ನಮ್ಮ ಬದ್ಧವೈರಿ ಯಾಗಿದ್ದಾನೆಂಬುದರಲ್ಲಿ ನನಗೆ ಸಂದೇಹವೇ ಇಲ್ಲ. ಭಯದಿಂದ ಕೂಡಿಮಾತ್ರ—ಅವನು ಸೂಚಿಸುವಂತೆ—ಅವನು ಹೀಗೆ ವರ್ತಿಸು

---

[17] "There is no doubt the charge of having engaged mercenaries with a view to hostility against the British Government will be proved against the Rajah even should he or these men not proceed to any acts of actual warfare against our troops. It is then necessary to determine what in either of these cases should be done."

—*Ibid p. 98.*

ತ್ತಿಲ್ಲ. ಸಕಾಲದಲ್ಲಿ, ಬಹಿರಂಗವಾಗಿ, ತಾನು ಬ್ರಿಟಿಷ್ ವಿರೋಧಿ ಯೆಂದು ಪ್ರಕಟಿಸಲು ಸಮಯಕಾಯುತ್ತಿದ್ದನೆಂದು ನಾನು ನಂಬು ತ್ತೇನೆ." [18]

ಭಯಗ್ರಸ್ತರೂ, ಸಂಶಯಗ್ರಸ್ತರೂ, ಆದ ಬ್ರಿಟಿಷ್ ಅಧಿಕಾರಿಗಳು ಸುರಪುರ ದರಸನ ಚಟುವಟಿಕೆಗಳ ಮೇಲೆ ಸಾವಿರ ಕಣ್ಣಿಟ್ಟಿದ್ದರು. ವೆಂಕಟಪ್ಪನಾಯಕ ನಾದರೋ ಸುರಪುರವನ್ನು ಶೂರರ ಪುರವನ್ನಾಗಿ ಮಾಡಿದ; ಕನ್ನಡನಾಡಿನ ಜನ ತೆಯ ಬೆಂಬಲಪಡೆದ; ಸಾಧ್ಯವಾದಮಟ್ಟಿಗೆ ಪ್ರಬಲವ್ಯೂಹಗಳನ್ನು ರಚಿಸಿದ; ಕಡೆಗೆ ಸಮರಕ್ಕೆ ಸಿದ್ಧನಾದ. ಬ್ರಿಟಿಷರಾದರೂ ಅಭೇದ್ಯವಾದ ಸುರಪುರದ ಕೋಟೆಯನ್ನಾಕ್ರಮಿಸಲು ಸಕಲ ಸನ್ನಾಹಗಳನ್ನೂ ಮಾಡಿದರು. ಸುರಪುರದ ಪತನದಿಂದ ಮಾತ್ರ ತಮ್ಮ ಸ್ಥಾನ, ಜೀವನ ಭದ್ರವೆಂದರಿತ ಬ್ರಿಟಿಷ್ ಅಧಿಕಾರಿಗಳು ವೆಂಕಟಪ್ಪನಾಯಕನ ಮೇಲೆ ಯುದ್ಧ ಸಾರಿದರು. ಸುರಪುರ ಸಮೀಪದ ಊರೊಂದರಲ್ಲಿ ಮಾಲಕಮನ ನಾಯಕತ್ವದಲ್ಲಿ ಬ್ರಿಟಿಷ್ ಪಡೆಯೊಂದನ್ನಿಟ್ಟರು. ಮದರಾಸಿನ ಪಡೆಯೊಂದು ಸುರಪುರದ ಪೂರ್ವಗಡಿಯ ಸಮೀಪದಲ್ಲೇ ಬೀಡು ಮಾಡಿತ್ತು. ಲಿಂಗಸುಗೂರಿನಲ್ಲೂ ಮತ್ತೊಂದು ಪಡೆ ಸಿದ್ಧವಾಗಿತ್ತು. ಸಂಗ್ರಾಮ ಘೋಷಣೆಗೆ ಮೊದಲು ಕ್ಯಾಂಬೆಲ್ ಎಂಬ ಅಧಿಕಾರಿಯನ್ನು ವೆಂಕಟಪ್ಪನ ಬಳಿಗೆ ಕಳುಹಿಸಿ ಕೊಟ್ಟರು. ಅವನು ಮಾಡುವ ಸಂಧಾನವನ್ನೆಲ್ಲಮಾಡಿದ, ಆಡುವ ಮಾತೆಲ್ಲ ಆಡಿದ. ಶೂರ ಸುರಪುರನಾಯಕ ತಾನು ಮಾಡಿದ ಸಂಕಲ್ಪದಿಂದ ಚಲಿಸಲಿಲ್ಲ. ಯುದ್ಧವನಿವಾರ್ಯವಾಯಿತು. ೭-೨-೧೮೫೮ ರಂದು ನಾಯಕನ ಸೈನಿಕರು ಬ್ರಿಟಿಷರ ಪಡೆಗಳ ಬೀಡುಗಳ ಮೇಲೆ ಧಾಳಿ ನಡೆಸಿದರು. ರಾತ್ರಿಯೆಲ್ಲ ನಡೆದ ಧಾಳಿಯಲ್ಲಿ, ಬ್ರಿಟಿಷ್ ಸೈನಿಕರನೇಕರು ಸತ್ತರು. ಮಾರನೆಯ ದಿನ ಬ್ರಿಟಿಷ್ ಪಡೆಗಳೆಲ್ಲವೂ ಸೇರಿ ಸುರಪುರವನ್ನು ಮುತ್ತಿದುವು. ಮದರಾಸಿನ ಕಡೆ ಯಿಂದ ಸೈನ್ಯ ಕರ್ನಲ್ ಹ್ಯೂಸನ ನಾಯಕತ್ವದಲ್ಲೂ, ಸುರಪುರ ಸಮೀಪದ

---

[18] "Under the circumstances enumerated above I see nothing to extenuate the conduct of the Rajah of Shorapur and I therefore conceive he should be dealt with as a rebel who was discovered levying men for hostile purposes against our Government and would arrest, imprison and remove him from Shorapur confiscating at the same time his principality.

"In the event of the Rajah with his mercenaries or followers proceeding to acts of actual warfare our adoption of such a course above will be equally plain and more imperative.

"Ever since the outbreak of the Revolt in Hindusthan rumours of the hostility of the Rajah of Shorapur to our Government have constantly reached me, but I did not until now feel myself strong enough to bring him to account. There is not a doubt in my mind that he has been all along hostile to us and that it has not been from fear alone as he alleges that he has acted as he had done. Indeed I believe, he only watched his opportunity to openly declare himself against us."

—*The Freedom Struggle in Hyderabad, Vol. II, pp. 96, 97.*

ಸೈನ್ಯಗಳು ಕರ್ನಲ್ ಮಾಲ್ಕಂ ನಾಯಕತ್ವದಲ್ಲೂ, ಸುರಪುರದ ಮುತ್ತಿಗೆಗೆ ಧಾವಿಸಿದುವು. ಉಭಯ ಪಕ್ಷದವರಿಗೂ ಘೋರ ಯುದ್ಧವಾಯಿತು. ಬ್ರಿಟಿಷರ ಕಡೆ ಅನೇಕ ಸಾವುನೋವುಗಳಾದುವು. ಕ್ಯಾಪ್ಟನ್ ನ್ಯೂಬರಿ ಸತ್ತ. ಸುರಪುರದ ಕೋಟೆ ಭೇದಿಸಲು ಬ್ರಿಟಿಷರಿಗೆ ಸಾಧ್ಯವಾಗಲಿಲ್ಲ. ಮೆಡೋಸ್ ಟೆಯಿಲರ್ ಹೇಳುವಂತೆ

> "ಸುರಪುರ ನಗರ ಬಹಳ ಬಲಯುತವಾಗಿತ್ತು. ಅದರ ಮಾರ್ಗ ಗಳಾದರೋ ದುರ್ಗಮ. ಕೋಟೆಯ ಗೋಡೆಗಳೂ, ಕೊತ್ತಲಗಳೂ ರಕ್ಷಕರಿಂದ ತುಂಬಿಹೋಗಿತ್ತು. ತಕ್ಷಣ ಬ್ರಿಟಿಷರದನ್ನು ಮುತ್ತ ಲಿಲ್ಲ . . . . ."[19]

ಕೋಟೆಯ ಸುರಂಗಮಾರ್ಗವನ್ನು ಹುಡುಕಲು ಬ್ರಿಟಿಷ್ ಸೈನಿಕರು ಮೂವರು ಪ್ರಯತ್ನಮಾಡಿದರು. ಕಾವಲಿದ್ದ ರೋಹಿಲಾ ಸೈನಿಕರು ಅವರನ್ನು ಹಿಡಿದು, ತುಂಡುತುಂಡುಮಾಡಿ, ಊರಿನ ಬೀದಿಗಳಲ್ಲಿ ಮೆರೆವಣಿಗೆ ಮಾಡಿದರು. ನೇರವಾಗಿ ಕೋಟೆಯನ್ನಾಕ್ರಮಿಸುವುದು ಅಸಾಧ್ಯವೆಂದರಿತ ಬ್ರಿಟಿಷರು ಕುತಂತ್ರ ದಿಂದಲಾದರೂ ಅದನ್ನು ಕೈವಶ ಮಾಡಿಕೊಳ್ಳಲು ಹವಣಿಸಿದರು. ವಂಚಕನು ಯಾವನಾದರೂ ಸಿಕ್ಕಿಯಾನೆ ಎಂದು ಹುಡುಕಿದರು. ಅವರ ಅದೃಷ್ಟ; ವಾಸನ ಗೇರಿ ಭೀಮರಾಯನೆಂಬವನೊಬ್ಬ ಸಿಕ್ಕಿದ. ಇವನು ವೆಂಕಟಪ್ಪ ನಾಯಕನ ಆಪ್ತವರ್ಗದವ; ಅಂತರಂಗದಲ್ಲಿ ಸಲಹೆಗಳನ್ನು ಮಾಡುತ್ತಿದ್ದವ. ಈ ದೇಶ ದ್ರೋಹಿ ಭೀಮರಾಯನೇ ಬ್ರಿಟಿಷರಿಗೆ ಸಹಾಯ ಮಾಡಿದವನೆಂದೂ, ಅವನ ಪಿತೂರಿಯ ಫಲವಾಗಿಯೇ ಅಭೇದ್ಯವಾದ ಕೋಟೆ ಬ್ರಿಟಿಷರ ವಶವಾಯಿತೆಂದೂ, ಸುರಪುರದ ಜನರಿಂದಿಗೂ ಹೇಳುತ್ತಾರೆ. ಮೆಡೋಸ್ ಟೆಯಿಲರ್ ಈ ವಿವರಣೆ ಯನ್ನೊಪ್ಪುವುದಿಲ್ಲ.

> "ಬೇರೆ ದಾರಿಯೇ ಇಲ್ಲವೆಂಬುದವನಿಗೆ ಗೊತ್ತಾಯಿತು; ತಲೆ ತಪ್ಪಿಸಿಕೊಳ್ಳುವುದೊಂದೇಮಾರ್ಗವೆಂದರಿತ. ಸಂಜೆ, ಕೆಲವು ಸವಾರ ರೊಂದಿಗೆ (ವೆಂಕಟಪ್ಪನಾಯಕ) ಸುರಪುರವನ್ನು ಬಿಟ್ಟು, ನೇರವಾಗಿ ಹೈದರಾಬಾದಿನ ಕಡೆ ಹೊರಟ."

ನೆಂಬದಾಗಿ ಹೇಳುತ್ತಾನೆ. ಅದೇನೇ ಆಗಲಿ. ಭೀಮರಾಯನ ಸ್ವಾಮಿದ್ರೋಹತನ ದಿಂದ ನಾಯಕನು ಪರದೇಶದಾಶ್ರಯ ಪಡೆಯಬೇಕಾಗಿ ಬಂತು. ಕೋಟೆಯೊಳಗಿನ ಬ್ರಿಟಿಷರನ್ನು ಎದುರಿಸುವುದು ಅಸಾಧ್ಯ; ಊರನ್ನುಬಿಟ್ಟು ಹೊರಡುವುದೇ ಕ್ಷೇಮ ವೆಂದು ಭೀಮರಾಯ ನಾಯಕನಿಗೆ ಸಲಹೆ ಮಾಡಿದನೆಂದೂ, ಆ ಸಲಹೆಯಂತೆ ನಾಯಕ ಹೈದರಾಬಾದಿಗೆ ಹೊರಟನೆಂದೂ ತಿಳಿದು ಬರುತ್ತದೆ. ಎಂತಹ ಆಶ್ಚರ್ಯ! ಹೈದರಾಬಾದಿನಲ್ಲಿ ಸಾಲಾರ್ ಜಂಗನ ಸಹಾಯ ಪಡೆಯಬೇಕೆಂದು ನಾಯಕ ಅವನ ಬಳಿ ಸಾರಿದ. ಸಾಲಾರ್ ಜಂಗನಿವನಿಗೆ ಸಹಾಯ ಕೊಡುವ

---

[19] "As the City of Shorapur was very strong, the approaches difficult of access and the walls and bastions crowded with defenders, they did not attack it at once . . . . . ."

—*Story of My Life*: Medows Taylor, Chapter XV.

ಮಾತು ಹಾಗಿರಲಿ; ಮರೆಹೊಕ್ಕ ವೆಂಕಟಪ್ಪ ನಾಯಕನನ್ನು ಅವನು ಬ್ರಿಟಿಷರಿಗೆ ಹಿಡಿದೊಪ್ಪಿಸಿದ!

ಮೆಡೋಸ್ ಟೆಯಿಲರನು ಈ ನಾಯಕ-ಸಾಲಾರ್ ಜಂಗ್ ಪ್ರಕರಣದ ಮಾತನ್ನೇ ಎತ್ತುವುದಿಲ್ಲ.

> "...... ಹಿಡಿದದಾರಿ ಬಿಟ್ಟು ಹೈದರಾಬಾದಿಗೆ ಹೋದ. ಅಲ್ಲಿಗೆ ಹೋದಾಗ ಅವನೊಂದಿಗೆ ಇಬ್ಬರು ಮಾತ್ರ ಇದ್ದರು. ಅಲ್ಲಿ ಅರಬರ ಸಹಾಯ ಪಡೆಯುವ ಪ್ರಯತ್ನಗಳಲ್ಲಿ ವಿಫಲನಾಗಿ, ಬೀದಿ ಬೀದಿಗಳಲ್ಲಿ ಅಲೆಯುತ್ತಿದ್ದ. ಆಗ ಅನುಮಾನದಮೇಲೆ ಅವನನ್ನು ಹಿಡಿದು, ಮಂತ್ರಿ ಸಾಲಾರ್‌ಜಂಗನ ಮುಂದೆ ನಿಲ್ಲಿಸಿದರು. ತಕ್ಷಣ ಅವನನ್ನು ಸಾಲಾರ್‌ಜಂಗ್ ರೆಸಿಡೆಂಟರ ಬಳಿಗೆ ಕಳುಹಿಸಿಬಿಟ್ಟ."

ಎಂಬದಾಗಿ ಹೇಳಿದ್ದಾನೆ. ಸುರಪುರದ ಮಾತನ್ನೆತ್ತಿಕೊಂಡು

> "ರಾಜನು ತಲೆತಪ್ಪಿಸಿಕೊಂಡು ಹೋದನೆಂಬ ಸುದ್ದಿ ಹರಡಿತು. ಸುರಪುರದ ಬೇಡರೂ, ಸಂಬಳದ ಸೈನಿಕರೂ ಚದರಿ, ರಾತ್ರಿಯೇ ಸುರಪುರವನ್ನು ಬಿಟ್ಟರು. ಅನಂತರ ಬ್ರಿಟಿಷ್ ಸೈನ್ಯ ನಗರ ಪ್ರವೇಶ ಮಾಡಿತು. ಅದನ್ನು ಎದುರಿಸುವವರೇ ಇಲ್ಲ. ನಗರವೆಲ್ಲ ಬರಿದಾಗಿತ್ತು."

ಎಂದು ಹೇಳಿ ಅದರ ಕಥೆಯನ್ನು ಮುಗಿಸಿದ್ದಾನೆ.

ವೆಂಕಟಪ್ಪನಾಯಕ ಬ್ರಿಟಿಷರ ಬಂದಿಯಾದ. ಅವನ ವಿಚಾರಣೆ, ಅವನ ಕಡೆಯ ದಿನಗಳ ವಿಚಾರವಾಗಿ ಟೆಯಿಲರ್ ತನ್ನ ಆತ್ಮಕಥೆಯಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾನೆ. ಬಂದಿ ವೆಂಕಟಪ್ಪನನ್ನು ಒಲಿಸಿಕೊಂಡು, ಅವನ ಮೂಲಕ ಬಂಡಾಯದ ನಾಯಕರನ್ನೂ, ವಿವರಗಳನ್ನೂ, ತಿಳಿಯಲು ಬ್ರಿಟಿಷ್ ಅಧಿಕಾರಿಗಳು ಸಾಹಸ ಮಾಡಿದರು. ಬಾಲ್ಯದಿಂದಲೂ ನಾಯಕನ ತಂದೆಯಂತಿದ್ದ, ಗುರುವಿನಂತಿದ್ದ, ಮೆಡೋಸ್ ಟೆಯಿಲರನ್ನು ಅವನ ಬಳಿ ಕಳುಹಿಸಿದರು. ತಂದೆಯಾದರೇನು, ಗುರುವಾದರೇನು, ಯಾರಾದರೇನು? ವೆಂಕಟಪ್ಪನಾಯಕ ಮಾನಧನ; ದೇಶಭಕ್ತ; ಸ್ವಾತಂತ್ರ್ಯ ಪ್ರೇಮಿ. ಟೆಯಿಲರಿಗೆ ಆಶಾಭಂಗವನ್ನುಂಟುಮಾಡಿದ.

ಮೊದಲನೆಯ ಸಾರಿ ಕಂಡಾಗ, ನಾಯಕ ಟೆಯಿಲರನ್ನು ಬಿಗಿದಪ್ಪಿಕೊಂಡು "ಅಪ್ಪಾ!" "ಅಪ್ಪಾ!" 'ಎಂದು ಮರುಗಿದ.' "ನನ್ನಗಂಟಲು ಒಣಗುತ್ತಿದೆ; ಮಾತು ಹೊರಡದು; ನಾಳೆ ಬಾ; ಎಲ್ಲ ಹೇಳುತ್ತೇನೆ" ಅಂದ.

ಎರಡನೆಯ ಸಾರಿ ಕಂಡಾಗ, ನಾಯಕ ಹಸುಳೆಯಂತೆ ತನ್ನ ದುರಂತರ ಕಥೆಯನ್ನೆಲ್ಲ ವಿಸ್ತರಿಸಿದ. ಆಮೇಲೆ ಟೆಯಿಲರ್ "ರೆಸಿಡೆಂಟರನ್ನು ನೋಡಬಯಸುವೆಯಾ" ಎಂದು ಕೇಳಿದ.

> "ಅಪ್ಪಾ! ಇಲ್ಲ. ನಾನವನಲ್ಲಿ ಪ್ರಾಣಭಿಕ್ಷೆ ಬೇಡುವೆನೆಂದವನು ನಿರೀಕ್ಷಿಸಬಹುದು. ಹೇಳವನಿಗೆ; ಮಹಾ ಆಂಗ್ಲನು ನನ್ನ ಜೀವ ಉಳಿಸಿದರೆ ನಾನೂ ನಮ್ಮವರೂ ಸತ್ಯವಾಗಿ ಸದಾ ನೆನೆದುಕೊಳ್ಳುತ್ತೇವೆ. ಆದರೆ ನಾನೇನು ಮಾಡಿದೆನೋ ಅದಕ್ಕಾಗಿ ನಾನು

ಸಾಯಲೇಬೇಕು. ಷಂಡನಂತೆ ನಾನು ಪ್ರಾಣಭಿಕ್ಷೆ ಬೇಡುವುದಿಲ್ಲ.
ನನ್ನ ಜನರಿಗೂ ನಾನು ದ್ರೋಹಮಾಡುವುದಿಲ್ಲ."

ಎಂಬದಾಗಿ ದಿಟ್ಟತನದಿಂದ ಉತ್ತರವಿತ್ತ.

ಸುರಪುರಕ್ಕೆ ಹೋಗುವ ಮೊದಲು ಟೆಯಿಲರ್ ಮತ್ತೊಮ್ಮೆ ವೆಂಕಟಪ್ಪ ನಾಯಕನನ್ನು ಕಂಡ. ವಿಚಾರಣೆ ಮಾಡುವವರ ಮುಂದೆ ತನ್ನ ಮುಂದೆ ಹೇಳಿದಂತೆಯೇ ಸತ್ಯವನ್ನು ಹೇಳುವಂತೆ ನಾಯಕನಿಗೆ ಸೂಚಿಸಿದ.

"ನಾನು ಎಲ್ಲವನ್ನೂ ಹೇಳುತ್ತೇನೆ. ನನ್ನನ್ನು ಪ್ರೇರೇಪಿಸಿದವರ ಹೆಸರುಗಳನ್ನು ಬಹಿರಂಗಪಡಿಸೆಂದೇನಾದರೂ ಅವರು ಒತ್ತಾಯ ಮಾಡಿದರೆ ನಾನು ಮೌನವಹಿಸುತ್ತೇನೆ. ಅವರು ಮತ್ತೆ ತಲೆಯೆತ್ತಿದರೆ ಅವರನ್ನು ಮಟ್ಟಹಾಕುವ ಶಕ್ತಿ ಸರಕಾರಕ್ಕಿದೆ. ಅವರೇನು ತಾನೆ ಮಾಡಬಲ್ಲರು? ಅವರೆಲ್ಲರಲ್ಲಿ ನಾನು ಸಮರ್ಥನಲ್ಲವೆ? ಈಗ ನನ್ನ ಗತಿಯೇನು? ನಾನೀಗ, ಮೃತ್ಯುಮುಖ ದರ್ಶನಮಾಡುವಾಗ ಹಲವು ತಿಂಗಳ ಹಿಂದೆ ಯಾರು ನನ್ನ ಸ್ವಾಮಿಭಕ್ತರಾಗಿದ್ದರೋ, ನಂಬಿದ್ದರೋ, ಅವರನ್ನು ಬಿಟ್ಟು ಕೊಡಲೆ? ಎಂದಿಗೂ ಇಲ್ಲ. ಅಪ್ಪಾ! ನಾನು ಕಾಲಾಪಾಣಿಯ ಮೇಲೆ ಹೋಗಲಾರೆ. ಆಜೀವ ಯಾವದಾದರೊಂದು ಕೋಟೆಯಲ್ಲಿ ಬಂದಿಯಾಗಿಯೂ ಇರಲಾರೆ. ಒಂದು ವೇಳೆ ಅವರಂತಹ ಶಿಕ್ಷೆ ಕೊಟ್ಟರೆ ನಾನದನ್ನು ಸಹಿಸಲಾರೆ. ನೀಚ ಬೇಡನಾದರೂ ಬಂದಿಯಾಗಿರಲು ಬಯಸುವುದಿಲ್ಲ. ನಾನು-ರಾಜ-ಬಂದಿಯಾಗಿರಲು ಅಪೇಕ್ಷಿಸುವೆನೆ?"[20]

ಎಂದಪೂರ್ವ ಗಂಭೀರ ವಾಣಿಯಿಂದ ಹೇಳಿದ. ಕರಗಿ ನೀರಾದ ಟೆಯಿಲರ್

"ನೀನು ಸಾಯಬೇಕಾದರೆ ವೀರಶಿಖಾಮಣಿಯಂತೆ ಸಾಯಿ"

ಅಂದ.

"ಅವರು ನನ್ನನ್ನು ಫಿರಂಗಿಯ ಬಾಯಿಗೆ ಬಿಗಿಯಲಿ. ನಾನು ಅಲುಗಾಡುವುದಿಲ್ಲ, ಭಯಪಡುವುದಿಲ್ಲ. ಕಡೆಯವರೆಗೂ ನೀನು ನನ್ನ ಬಳಿಯಲ್ಲೇ ಇರುವುದಾದರೂ ಸಾಧ್ಯವಾದರೆ ನನಗೆ ಪರಮ ಸಂತೋಷ. ಅಪ್ಪಾ! ಒಂದು ಮಾತು; ನನ್ನನ್ನು ಅವರು ಗಲ್ಲಿಗೆ ಹಾಕಲು ಬಿಡಬೇಡ. ಕಳ್ಳನಂತೆ ನನ್ನನ್ನು ಗಲ್ಲಿಗೆ ಹಾಕಲು ಅಂತಹ

---

[20] "I will surely tell all, but if they press me to disclose the names of those who excited me, I shall be silent. Government is powerful enough to crush them if they rise. But what can they do? Was I not the strongest among them? And yet, where am I now? Shall I, who have to face death, be faithless to those who trusted me months ago? Never, appa, I would rather die than be sent over the black water, or shut up in a fortress always. Suppose they sentence me to that, I could not bear it. No the meanest Beydur could not live if he were imprisoned and shall I a Rajah?"

"If you have to die, die like a brave man." M. Taylor.

ಕಾರ್ಯ ನಾನೇನೂ ಮಾಡಿಲ್ಲ. ನಾನು ಕೇಳುವ ಅನುಗ್ರಹವಿದೊಂದೇ ಯೆಂಬದಾಗಿ ರೆಸಿಡೆಂಟರಿಗೆ ಹೇಳು. ಹಾಗೆ ಹೇಳುವುದಾಗಿ ನನಗೆ ಮಾತುಕೊಡು "[21].

ಎಂಬದಾಗಿ ವೆಂಕಟಪ್ಪ ನಾಯಕ ಕೇಳಿದ. ಟೆಯಿಲರ್ ಮಾತುಕೊಟ್ಟ. ವೆಂಕಟಪ್ಪನಾಯಕ ಟೆಯಿಲರನ್ನು ಗಾಢವಾಗಿ ಆಲಿಂಗಿಸಿ

"ಅಪ್ಪಾ! ಹೋಗು; ನಾನು ನಿನ್ನ ಮುಖವನ್ನಿನ್ನು ನೋಡುವ ಹಾಗಿಲ್ಲ; ನಿನ್ನ ವಾಣಿಯನ್ನು ಕೇಳುವಹಾಗಿಲ್ಲ. ನಾನು ನಿನ್ನನ್ನು ಕಂಡೆ, ಕೃತಜ್ಞನಾದೆ. ನನ್ನನ್ನು ಕಂಡೆನೆಂದು ಎಲ್ಲರಿಗೂ ಹೇಳು. ನಾನು ಷಂಡನಲ್ಲವೆಂದು ಅವರೆಲ್ಲರಿಗೂ ತಿಳಿಸು."[22]

ಎಂಬದಾಗಿ ಹೇಳಿದ ಮೇಲೆ ಟೆಯಿಲರ್ ಹಿಂತಿರುಗಿದ. ನಡೆದದ್ದನ್ನೆಲ್ಲ ರೆಸಿಡೆಂಟಗೆ ವಿವರಿಸಿದ. ರೆಸಿಡೆಂಟಾದರೋ

"ಟೆಯಿಲರ್! ಸಾಧ್ಯವಾದರೆ ಸಕಾಲದಲ್ಲಿ ಅವನನ್ನು ಉಳಿಸೋಣ. ಸದ್ಯಕ್ಕೆ ವಿದ್ಯಮಾನಗಳು ಹೋಗುವದಾರಿಯಲ್ಲೇ ಹೋಗಬೇಕು. ಹುಡುಗ ಗುಣಾಢ್ಯನೆಂದೇ ನನ್ನ ನಿಜವಾದ ಭಾವನೆ. ನಾವು ಅವನ ಪ್ರಾಣವನ್ನುಳಿಸಬಹುದಾದರೆ, ಈ ಅನುಭವದಿಂದ ಅವನು ಉತ್ತಮನೇ ಆಗುತ್ತಾನೆ." [23]

ಎಂಬದಾಗಿ ಹೇಳಿದ.

ವೆಂಕಟಪ್ಪ ನಾಯಕನ ವಿಚಾರಣೆ ಆಯಿತು: ಮರಣದಂಡನೆಯನ್ನು ವಿಧಿಸಿದ್ದೂ ಆಯಿತು. ಟೆಯಿಲರನ ಸಂಧಾನ ಫಲವೋ, ರೆಸಿಡೆಂಟನ ಔದಾರ್ಯದ ಫಲವೋ, ಮರಣದಂಡನೆ ಹೋಗಿ ಆಜೀವ ಶಿಕ್ಷೆವಿಧಿಸಲಾಯಿತು. ಗವರ್ನರ್-ಜನರಲ್‌ರವರು ಆ ಶಿಕ್ಷೆಯನ್ನು ನಾಲ್ಕು ವರ್ಷಗಳಿಗಿಳಿಸಿದರು. ದಕ್ಷಿಣದೇಶದ ಯಾವುದಾದರೊಂದು ಕೋಟೆಯಲ್ಲಿ ನಾಯಕನನ್ನಿಡತಕ್ಕದ್ದೆಂದೂ ನಿಶ್ಚಯ ವಾಯಿತು. ಸರಿಯಾದ ರಕ್ಷಣೆಯಲ್ಲಿ ಅಧಿಕಾರಿಗಳು ಅವನನ್ನು ಗೊತ್ತಾದ ಸ್ಥಳಕ್ಕೆ

---

[21] "I shall not tremble when they tie me up to a gun. If you could be near me to the last, I should be happier. Only one thing, appa, do not let them hang me. I have done nothing to be hanged for, like a robber. Tell the Resident that is all the favour I ask. Promise me to tell him."

[22] "Go; appa—go now. I shall never look upon your face or hear your voice again; but I am thankful to have seen you. Tell them all that you have been with me, and that I was not a coward."

[23] "We will save him if we can, Taylor, when the time comes. Just now, things must take their course. But I am sure there is good stuff in the lad; and if we can save his life, he will be all the better for this experience."

—*Story of My Life*: Medows Taylor, Chapter XV.

ಪಲ್ಲಕ್ಕಿಯಲ್ಲಿ ಕರೆದೊಯ್ಯುತ್ತಿದ್ದರು. ಪ್ರಯಾಣದ ಮೊದಲನೆಯ ಬೀಡಿನಲ್ಲಿ ತಂಗಿದರು. ರಕ್ಷಕನಾಗಿ ಹಿಂಬಾಲಿಸಿದ್ದ ಆಂಗ್ಲ ಅಧಿಕಾರಿಯು ನಡುಕಟ್ಟನ್ನು ಬಿಚ್ಚಿ, ಕುರ್ಚಿಗೆ ತಗಲಿಸಿದ. ಅದರಲ್ಲಿ ಗುಂಡು ತುಂಬಿದ ರಿವಾಲ್ವರಿತ್ತು. ಅವನು ಗುಡಾರದ ಹೊರಕ್ಕೆ ಹೋಗಿ ಮುಖ ತೊಳೆದುಕೊಳ್ಳಲಾರಂಭಿಸಿದ. ಗುಡಾರದೊಳಗೆ ತಕ್ಷಣ ಗುಂಡಿನ ಶಬ್ದವಾಯಿತು. ಓಡಿಬಂದು ನೋಡಿದ; ರಾಜ ಸತ್ತು ನೆಲದ ಮೇಲೆ ಉರುಳಿದ್ದ. ಗುಂಡು ಅವನ ಹೊಟ್ಟೆಹೊಕ್ಕು, ಬೆನ್ನು ಮೂಳೆ ದಾಟಿತ್ತು.

ವೆಂಕಟಪ್ಪನಾಯಕನೊಂದಿಗೆ ಅವನ ಹಿರಿ ಮತ್ತು ಕಿರಿ ರಾಣಿಯರಿಬ್ಬರೂ ಇರಬಹುದೆಂದೂ ಸರಕಾರದ ಆಜ್ಞೆಯಾಗಿತ್ತು. ರಾಣಿಯರಿಬ್ಬರೂ ತಮ್ಮೊಡೆಯನನ್ನು ಕರ್ನೂಲಿನಲ್ಲಿ ಸೇರಬೇಕಾಗಿತ್ತು. ವಿಧಿಯ ವಿಲಾಸವೇ ಬೇರೆಯಾಯಿತು. ವೀರ ವೆಂಕಟಪ್ಪನಾಯಕನ ಕಥೆ ಮುಗಿಯಿತು.

ವೆಂಕಟಪ್ಪನಾಯಕನ ಸಾವನ್ನು ಕುರಿತು ಅನೇಕರು ಅನೇಕ ವಿಧವಾಗಿ ಅನುಮಾನಮಾಡಿದ್ದಾರೆ. ಮೆಡೋಸ್ ಟೆಯಿಲರಾದರೂ ಈ ರೀತಿಯಾಗಿ ಹೇಳಿದ್ದಾನೆ.

> "ಇದು ಬುದ್ಧಿ ಪೂರ್ವಕವಾಗಿ ಮಾಡಿದ ಕೆಲಸವೆ? ನಾನು ಹಾಗೆ ಭಾವಿಸುವುದಿಲ್ಲ. ಮೊದಲಿಂದಲೂ ತನ್ನ ಹತ್ತಿರ ಇರುವ ಪ್ರತಿಯೊಂದು ವಸ್ತುವನ್ನೂ ಎತ್ತಿಕೊಂಡು, ಪರೀಕ್ಷಿಸುವುದು ಅವನ ಅಭ್ಯಾಸ. ಹೊಸ ವಸ್ತುವಾಗಿದ್ದರಂತೂ ವಿಶೇಷವಾಗಿ ಎತ್ತಿ ನೋಡುತ್ತಿದ್ದ. ಇದು ಅವನಿಗೆ ಚಿಕ್ಕಂದಿನಿಂದ ಬಂದ ಚಾಳಿ. ಎಷ್ಟೋ ಸಾರೆ ನಾನಿದನ್ನು ತಡೆದಿದ್ದೇನೆ. ಅವನೆಂದೂ ರಿವಾಲ್ವರನ್ನೇ ನೋಡಿಲ್ಲ. ಆದಕಾರಣ ಈ ಹೊಸ ವಸ್ತು ಅವನಲ್ಲಿ ಆಸೆಹುಟ್ಟಿಸಿರಬೇಕು; ಅವನದನ್ನು ನೋಡಿರಬೇಕು. ನೋಡಿ, ಅದರ ಮೇಲೆ ಕೈಹಾಕಿರಬೇಕು. ಅವನು ಉದ್ದೇಶಪಡದೆಯೇ ಪಿಸ್ತೂಲು ಹಾರಿರಬೇಕು. ಅವನೊಂದಿಗೆ ಯಾರೂ ಇರಲಿಲ್ಲ—ಅವನನ್ನು ಯಾರೂ ನೋಡಲಿಲ್ಲ. ಈ ವಿಚಾರದಲ್ಲಿ ಬರೇ ಊಹೆಗಳನ್ನು ಮಾತ್ರ ಮಾಡಬಹುದು. ನಾನವನನ್ನು ಚೆನ್ನಾಗಿ ಬಲ್ಲೆನಾಗಿ ಇದು ಆತ್ಮಹತ್ಯೆಯೆಂದು ನಾನು ನಂಬುವುದಿಲ್ಲ."[24]

---

[24] "Was the act intentional ? I think not. He had a trick always of taking up and examining everything lying near him, more especially if it were new to him ; and he had had this habit from childhood, and I had often checked him for it. I do not think he could ever have seen a revolver—and such a weapon would be too tempting to escape notice ; he would be sure to snap it, or meddle with the hook, and the pistol may have exploded without his intending it at all. No one was with him—no one saw him,— so that only conjectures could be raised about the event ; but I who knew him well, do not believe it was suicide."

—*Story of My Life*: Medows Taylor, Chapter XV.

ಆದರೆ ಹೈದರಾಬಾದಿನ ಸ್ವಾತಂತ್ರ್ಯಸಂಗ್ರಾಮೇತಿಹಾಸಕಾರರು

> "ಕೈಸೆರೆ ಸೆಕ್ಕಿದೆನಲ್ಲಾ ಎಂಬ ಅವಮಾನವನ್ನೂ, ವಿಚಾರಣೆಗೆ ಒಳಪಡಿಸಿದರಲ್ಲಾ ಎಂಬ ನೋವನ್ನೂ, ಮತ್ತು ದೀರ್ಘಕಾಲ ಬಂಧನದಲ್ಲಿರಬೇಕಲ್ಲಾ ಎಂಬ ಭಯವನ್ನೂ, ಸಹಿಸಲಾರದೆ ಸಿಕ್ಕ ಮೊದಲ ಅವಕಾಶದಲ್ಲಿ, ತನ್ನ ಜೀವವನ್ನಂತ್ಯಗೊಳಿಸಿದ" [25]

ನೆಂಬದಾಗಿ ಅಭಿಪ್ರಾಯಪಟ್ಟದ್ದಾರೆ. ಮೇಜರ್ ಜನರಲ್ ಸರ್ ಜಾರ್ಜ್ ಲೆಗ್ರ್ಯಾಂಡ್ ಜೇಕಬ್‌ರವರು ತಾವು ಬರೆದ ಗ್ರಂಥದಲ್ಲಿ ಹೇಳಿರುವ ಮಾತು ಹೀಗಿದೆ:

> "ರಾಜನು ಬಂದಿಯಾದ; ವಿಚಾರಣೆಯಾಗಿ ಆಜೀವ ಶಿಕ್ಷೆಯಾಯಿತು. ಕರಾವಳಿಗವನನ್ನು ಒಯ್ಯುತ್ತಿದ್ದಾಗ ಅವನ ರಕ್ಷಕ ಅಧಿಕಾರಿಯಿಂದ ಹೇಗೋ ರಿವಾಲ್ವರನ್ನು ಪಡೆದ. ಗುಂಡುಹಾರಿಸಿ, ಕೊಂದುಕೊಂಡ. ಅವನು ಸಾಯುವುದಕ್ಕೆ ಮೊದಲು ಕೊಟ್ಟ ಹೇಳಿಕೆಯು ಅಮೂಲ್ಯವಾದ ಪ್ರಭುತ್ವಪತ್ರ. ಪಿತೂರಿಯ ಮೇಲೆ ಸಾಧಾರಣವಾಗಿ ಇದು ಬೆಳಕನ್ನು ಚೆಲ್ಲುತ್ತದೆ." [26]

ಇಪ್ಪತ್ತುನಾಲ್ಕು ವರ್ಷಗಳು ತುಂಬುವುದರೊಳಗಾಗಿ ವೆಂಕಟಪ್ಪನಾಯಕನ ಜೀವನ ಕೊನೆಗಂಡಿತು. ಅವನ ಸಾವಿನ ಸುದ್ದಿಕೇಳಿ ಸುರಪುರದ ಜನರೆಲ್ಲ ಕಂಗೆಟ್ಟು, ದಿಕ್ಕುತೋರದೆ, ಬ್ರಿಟಿಷರಿಗೆ ಶರಣಾಗತರಾದರು. ಬ್ರಿಟಿಷ್ ಸೈನಿಕರು ಸುರಪುರದಲ್ಲಿ ತಮ್ಮ ವಿಜಯಪತಾಕೆಯನ್ನು ಹಾರಿಸಿದರು. ಸುರಪುರದ ರಾಜತ್ವ ಮಣ್ಣುಗೂಡಿತು. ವೆಂಕಟಪ್ಪನಾಯಕನಿಗೆ ನೆರವಾದವರನೇಕರನ್ನು ಬ್ರಿಟಿಷರು ಗಲ್ಲಿಗೇರಿಸಿದರು.

ಏನಾದರೇನು; ವೆಂಕಟಪ್ಪನಾಯಕನನ್ನು ಯಾರೂ, ಎಂದೂ, ಮರೆಯುವ ಹಾಗಿಲ್ಲ. ಅವನ ಹೆಸರು ಅಮರವಾಗಿದೆ. ಇದಕ್ಕೆ ಕಾರಣವನ್ನು ಅವನ ಸ್ವಾತಂತ್ರ್ಯ ಪ್ರೇಮ ಮತ್ತು ಅವನ ಗಂಭೀರ ನಿರ್ಭಯದಲ್ಲಿ ಕಾಣಬೇಕಾಗಿದೆ. ಅವನಿಗೆ ಸುರಪುರವೊಂದು ನೆಪಮಾತ್ರ. ಆ ಮೂಲಕ ಭಾರತದ ಸ್ವಾತಂತ್ರ್ಯವನ್ನು ಸಾಧಿಸುವುದು ಅವನ ಪರಮೋದ್ದಿಶ್ಯ. ಇದಕ್ಕಾಗಿ ದಕ್ಷಿಣ ಭಾರತದ

---

25 " . . . Unable to bear the indignities of his capture and his subsequent trial, as also dreading the prospect of a long period of imprisonment, he put an end to his life at the earliest opportunity."

*The Freedom Struggle in Hyderabad, Vol. II, p. 99.*

26 " . . . The Raja was made prisoner, tried and sentenced to transportation for life. On his way to the coast he managed to obtain the revolver of the Officer commanding his guard and shot himself. The confession that he made before his death was a valuable state-paper, throwing light on the general conspiracy."

—*Western India Before and During the Mutinies*, by Major General Sir George Le Grand Jacob, Second Edn. p. 218.

ರಾಜರನ್ನೆಲ್ಲ ಒಂದುಗೂಡಿಸಿ, ಬ್ರಿಟಿಷರೊಂದಿಗೆ ಹೋರಾಡಲು, ಪ್ರಯತ್ನಮಾಡಿದ. ಕರ್ಮ ಅವನ ಕರ್ತವ್ಯ ; ಫಲಾಫಲಗಳನ್ನು ಕಟ್ಟಿಕೊಂಡು ಅವನಿಗೇನಾಗಬೇಕು.

> " ದಕ್ಷಿಣ ಮಹಾರಾಷ್ಟ್ರದಲ್ಲೂ, ಉತ್ತರ ಕರ್ಣಾಟಕದಲ್ಲೂ, ಬಂಡಾಯದ ಒಂದು ಸಾಧಾರಣ ಯೋಜನೆ ಇತ್ತೆಂಬುದು ರಾಜಾ ವೆಂಕಟಪ್ಪನಾಯಕನ ವಿಚಾರಣೆಯಿಂದ ವಿಶದವಾಗುತ್ತದೆ. ಮಿರಜ್, ಕೊಲ್ಲಾಪುರ, ನರಗುಂದ, ಕೊಪ್ಪಳ, ರಾಯಚೂರು, ಸುರಪುರಗಳೇ ಬಂಡಾಯದ ಕೇಂದ್ರಗಳು "[26A]

ಹೀಗೆಂದು ಹೈದರಾಬಾದ್ ಸ್ವಾತಂತ್ರ್ಯ ಸಂಗ್ರಾಮೇತಿ ಹಾಸಕಾರರು ಹೇಳಿದ್ದಾರೆ. ಮೆಡೊಸ್ ಟೆಯಿಲರ್ ಸಹ ಸ್ವಲ್ಪ ಹೆಚ್ಚು ಕಡಿಮೆ ಹೀಗೆಯೇ ಅಭಿಪ್ರಾಯ ಪಟ್ಟಿದ್ದಾನೆ.

೧೮೫೭ನೆಯ ಮಹಾಕ್ರಾಂತಿಯ ಕಾಲದಲ್ಲಿ ಉತ್ತರ ಭಾರತದಲ್ಲಿ ನಾನಾ ಸಾಹೇಬನಿಗೆ ಯಾವ ಸ್ಥಾನವುಂಟೋ, ದಕ್ಷಿಣ ಭಾರತದಲ್ಲಿ ಸುರಪುರದ ಚಿಕ್ಕ ವೆಂಕಟಪ್ಪನಾಯಕನಿಗೆ ಆ ಸ್ಥಾನವುಂಟೆನ್ನಬಹುದು. ಭಾರತದ ಇತಿಹಾಸದಲ್ಲಿ ವಿದ್ವಾಂಸರು 'ಅನಾದರ' ಮಾಡಿದ ಮಹಾಪಾತ್ರಗಳು ಅನೇಕ ಇವೆ. ಅವುಗಳಲ್ಲಿ ಸುರಪುರದ ಮಹಾವೀರನೂ ಒಬ್ಬ. ರಣರಾಗ, ರಣಪರಾಕ್ರಮಿ, ರಣವಿಕ್ರಾಂತ, ರಣಧೀರರೆಂದು ಬಿರುದ ಪ್ರಖ್ಯಾತರಾದ ಕರ್ಣಾಟಕದ ವೀರಕುಲಪರಂಪರೆಯಲ್ಲಿ, ಸುರಪುರದ ನಾಯಕನ ಹೆಸರು ಎದ್ದು ಕಾಣುತ್ತದೆ.

---

26A "The trial of Rajah Venkatappa Naik reveals the existence of a general Plan of insurrection in Southern Maratta country and northern Karnatak Country the centres of which were Miraj, Kolhapur, Nargund, Koppal, Raichur and Sholapur."

—*The Freedom Struggle in Hyderabad, Vol. II, page 99.*

## ೨. ನರಗುಂದದ ಬಂಡಾಯ

"   .   .   .   .   ಗಂಡು ಸಂತಾನವಿಲ್ಲದಾಗ ಸಂಸ್ಥಾನಿಕರ ದತ್ತು ಸ್ವೀಕಾರವನ್ನು ಅಂಗೀಕರಿಸುವುದಿಲ್ಲ. ಸಂಸ್ಥಾನವು ಬ್ರಿಟಿಷ್ ಸರಕಾರಕ್ಕೇ ಸೇರತಕ್ಕದ್ದು. ಇದು ಸರಕಾರದ ಹಕ್ಕು. ಸರಕಾರದ ಈ ದತ್ತುಸ್ವೀಕಾರ ನಿರಾಕರಣ ನೀತಿಯು ಭಾರತದಲ್ಲೆಲ್ಲ ಪ್ರಚಂಡ ಅಪ್ರಿಯ-ಅಸಮಾಧಾನವನ್ನು ಉಂಟುಮಾಡಿತು. ಇನಾಂ ಕಮಿಷನ್ನಿನ ಕೆಲಸವಾದರೋ ಪರಿಸ್ಥಿತಿಯನ್ನು ಮತ್ತಷ್ಟು ವಿಷಮಗೊಳಿಸಿತು. ಈ ವಿಚಾರಕ್ಕೆ ಕೈಹಾಕಿದ್ದಾದರೆ ಕಂಟಕಮಾರ್ಗಪ್ರವೇಶ ಮಾಡಬೇಕಾದೀತು. ಇಷ್ಟುಮಾತ್ರ ಹೇಳಿದರೆ ಸಾಕು: ೧೮೫೭-೫೮ರ ಮಹಾಕ್ರಾಂತಿಗೆ ಕಾರಣಗಳೆಷ್ಟೋ ಇವೆ. ಅವುಗಳಲ್ಲಿ ದತ್ತುಸ್ವೀಕಾರ ನಿರಾಕರಣ ನೀತಿಯನ್ನು ಮೀರಿಸಿದ್ದು ಇನ್ನೊಂದಿಲ್ಲ .   .   .   .   ." 27

ಎಂಬದಾಗಿ ಜೇಕಬರು ಹೇಳಿದ್ದು ಅಕ್ಷರಶಃ ನಿಜ. ಭಾರತ-ಬ್ರಿಟನ್‌ಗಳ ಮಧುರ ಬಾಂಧವ್ಯವನ್ನಪೇಕ್ಷಿಸಿ ಕೆಲಸಮಾಡಿದ ಆಂಗ್ಲರು ಹಲವರಲ್ಲಿ ಜೇಕಬರೊಬ್ಬರು.

ನರಗುಂದದ ಬಂಡಾಯದ ಕಥೆಯು ಈ ಮಾತಿನ ಸತ್ಯವನ್ನು ಸ್ಥಾಪಿಸಲು ಒಂದು ಉದಾಹರಣೆ. ಈ ನರಗುಂದ ಧಾರವಾಡ ಜಿಲ್ಲೆಯಲ್ಲಿದೆ. ಹಿಂದೆ ಇದೊಂದು ಸಂಸ್ಥಾನ; ಇದರ ಕೋಟೆಯಾದರೂ ಇತಿಹಾಸ ಪ್ರಸಿದ್ಧವಾದುದು. ಭಾಸ್ಕರರಾವ ಭಾವೆ ಎಂಬ ಬ್ರಾಹ್ಮಣ ಸಂಸ್ಥಾನಕ್ಕೊಡೆಯ. ಜನ ಆತನನ್ನು ಪ್ರೇಮ ಗೌರವಗಳಿಂದ ಬಾಬಾಸಾಹೇಬನೆಂದು ಕರೆಯುತ್ತಿದ್ದರು.

ದಾದಾಜಿ ಭಾಸ್ಕರರಾಯನ ತಂದೆ; ಈತ ತನ್ನ ಇಳಿವಯಸ್ಸಿನಲ್ಲಿ ಆಡಳಿತ ಜವಾಬ್ದಾರಿಯನ್ನು ತನ್ನ ಬಂಧು ದಾದಾ ಲಿಮಯೆಗೆ ವಹಿಸಿದ್ದ. ಅವನು ಅಷ್ಟೇನು ಚತುರನೂ ಅಲ್ಲ, ಅನುಭವಶಾಲಿಯೂ ಅಲ್ಲ. ದೇಶದ ಹಣಕಾಸಿನ ಸ್ಥಿತಿ ತೃಪ್ತಿಕರವಾಗಿರಲಿಲ್ಲ. ಸಾಲಸೋಲಗಳ ಹೊರೆ ಬಲವಾಯಿತು. ೧೮೪೨ರಲ್ಲಿ ದಾದಾಜಿ ಸ್ವರ್ಗಸ್ಥನಾದ; ಭಾಸ್ಕರರಾಯ ಪಟ್ಟಕ್ಕೆ ಬಂದ. ತರುಣ ಬುದ್ಧಿವಂತ, ಮಹಾಧೈರ್ಯಶಾಲಿ. ರಾಜ್ಯಸೂತ್ರಗಳನ್ನು ವಹಿಸಿಕೊಂಡಂದಿನಿಂದ ಆಡಳಿತದ ವ್ಯವಸ್ಥೆಗಾರಂಭಿಸಿದ. ಕೈಕೊಂಡ ಪ್ರತಿಯೊಂದು ಕೆಲಸವನ್ನೂ ಸಮರ್ಪಕವಾಗಿ, ಜನಪ್ರಿಯವಾಗಿ ಮಾಡಿದ. ಜನರ ಸುಖಜೀವನಕ್ಕೆ ಅವರ ಉತ್ತಮ ಸಂಸ್ಕಾರವೇ

---

27 ".   .   .   . It would lead me into too thorny a subject were I to enter into the amount of disaffection caused throughout India by the assumed right of our Government to disallow succession by adoption, a claim which the labours of the Inam Commission envenomed; suffice it to say, that of the many causes of the great outburst of 1857 and 1858 no single one was so weighty as this policy.   .   .   ."

—*Western India Before and During the Mutinies*, by Major General Sir George Le Grand Jacob, p. 221.

ಕಾರಣವೆಂದರಿತು ಆ ಸಂಸ್ಕಾರದಾನದ ಸಲುವಾಗಿ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದ; ರಾಜಧಾನಿಯಲ್ಲೊಂದು ದೊಡ್ಡ ಸರಸ್ವತೀ ಭಂಡಾರ ಸ್ಥಾಪಿಸಿದ. ವಿದ್ವಜ್ಜನ ಕಲ್ಪವೃಕ್ಷವೆಂದವನು ಖ್ಯಾತನಾದ. ಬ್ರಿಟಿಷರು ನರಗುಂದವನ್ನು ಮುತ್ತಿ, ಆಕ್ರಮಿಸಿ, ಅದನ್ನು ಸುಟ್ಟು ಸೂರೆಮಾಡಿದರಷ್ಟೆ. ಆಗ ಅಮೂಲ್ಯವಾದ ೩-೪ ಸಾವಿರ ಸಂಸ್ಕೃತ ಗ್ರಂಥಗಳ ಭಂಡಾರ ಸುಟ್ಟು ಬೂದಿಯಾಯಿತು.

ಭಾಸ್ಕರರಾಯನಿಗೊಬ್ಬ ಮಗನಿದ್ದ; ಅವನೂ ತೀರಿಕೊಂಡ. ದೂರಾಲೋಚನೆಮಾಡಿ, ದತ್ತುಮಾಡಿಕೊಂಡು ಸಂಸ್ಥಾನಕ್ಕೊಬ್ಬ ಉತ್ತರಾಧಿಕಾರಿಯನ್ನಾಗಿ ಸಿದ್ಧಗೊಳಿಸಲು ಅನುವಾದ. ಕಂಪೆನಿ ಸರಕಾರಕ್ಕೆ "ದತ್ತುಮಾಡಿಕೊಳ್ಳಲು ಅಪ್ಪಣೆ ಕೊಡಿ" ರೆಂದು ಪತ್ರ ಬರೆದ. ಹಿಂದೂ ಧರ್ಮಶಾಸ್ತ್ರದಂತೆ, ಸಂಪ್ರದಾಯದಂತೆ, ದತ್ತು ಧರ್ಮಬದ್ಧವಾದದ್ದು, ನ್ಯಾಯಸಮ್ಮತವಾದದ್ದು; ಆದರೇನು; ಕಂಪೆನಿ ಸರಕಾರದವರು ಒಪ್ಪಿಗೆ ಕೊಡಲಿಲ್ಲ. ೧೮೫೫ರಲ್ಲಿ ರಾಮದುರ್ಗ ಸಂಸ್ಥಾನದ ರಾಧಾಬಾಯಿಗೆ ದತ್ತುಮಾಡಿಕೊಳ್ಳಲು ಅವಕಾಶಕೊಡಲಿಲ್ಲವೆ? ಈಗ ನನಗೇಕೆ ಆಗುವುದಿಲ್ಲವೆನ್ನುವಿರಿ—ಮೊದಲಾಗಿ ವಾದಿಸಿದ. ಕುಟಿಲೋಪಾಯ ಚತುರರಾದ ಬ್ರಿಟಿಷ್ ಅಧಿಕಾರಿಗಳು

> "ಸಂಸ್ಥಾನ ಸಾಲದಲ್ಲಿ ಮುಳುಗಿಹೋಗಿದೆ. ಅದು ಸಾಲಗಾರರಿಗೆ ಆಧಾರವಾಗಿ ಹೋಗಿದೆಯೆಂದು ಹೇಳಬಹುದು. ದತ್ತುಮಾಡಿಕೊಳ್ಳುವುದರಿಂದ ಪ್ರಯೋಜನವೇನೂ ಆಗುವುದಿಲ್ಲ"

ಎಂಬದಾಗಿ ಹೇಳಿ ಪ್ರಾರ್ಥನೆಯನ್ನು ನಿರಾಕರಿಸಿದರು. ಸಾಲವಿದ್ದಿತಾದರೂ ಅದಕ್ಕೆ ಲಿಮಯೆ ಕಾರಣ; ಬಾಬಾ ಸಾಹೇಬ ಯಾವ ಸಾಲವನ್ನೂ ಮಾಡಿರಲಿಲ್ಲ. ತಾನು ಅಧಿಕಾರವಹಿಸಿಕೊಂಡ ಕೂಡಲೇ ಸುಧಾರಣೆಗಳಿಗಾರಂಭಿಸಿ ಪ್ರಗತಿಮಾರ್ಗದಲ್ಲಿ ಮುಂದುವರಿದ. ಹೀಗಿದ್ದರೂ ಬ್ರಿಟಿಷ್ ಅಧಿಕಾರಿಗಳು ಸಾಲದ ನೆಪ ಮುಂದಿಟ್ಟು ಬಾಬಾ ಸಾಹೇಬನ ದತ್ತುಸ್ವೀಕಾರಮಾಡಿಕೊಳ್ಳುವ ಹಕ್ಕಿಗೆ ಸಂಚಕಾರ ತಂದರು. 'ಕಡಿದ ಗಾಯಕ್ಕೆ ಕಲ್ಲುಪ್ಪು' ಎಂಬಂತೆ ಬಾಬಾ ಸಾಹೇಬನು ಬ್ರಿಟಿಷರ ಅನ್ಯಾಯ, ತನಗಾದ ಅಪಮಾನ ಇವುಗಳಿಂದ ಬಹಳವಾಗಿ ನೊಂದ. [28] ಆತ್ಮಗೌರವವುಳ್ಳವನಾವನೂ ಸಹಿಸಲಾಗದ ನೋವು. ಸಂಸ್ಥಾನವು ಬ್ರಿಟಿಷರ ಪಾಲಾಗಿ ಹೋಗುವುದು; ತನ್ನ ಕುಟುಂಬ ಬ್ರಿಟಿಷ್ ಅಧಿಕಾರಿಗಳ ಕೃಪಾಕಟಾಕ್ಷಕ್ಕೆ ಸಿಕ್ಕಿ, ಹಂಗಿನ ಜೀವನ ನೂಕುವುದು; ಈ ಆಲೋಚನಾ ತರಂಗಗಳು ಅವನ ಹೃದಯದಲ್ಲೆದ್ದು, ಮಹಾಕೋಲಾಹಲವನ್ನುಂಟುಮಾಡಿದುವು. ರಾಜ್ಯ ರಾಜ್ಯಗಳನ್ನು ಒಂದಲ್ಲ

---

[28] ". . . . It would be unfair to him not to state that he conceived himself grievously wronged by our Government, and it was this that probably drove him into the general movement of the time, before others more prudent, who held back till they should see the winning side. We had refused to sanction his adopting a son, and his State therefore, one of the oldest possessions in the S. M. Country, and not like many held on tenure of service, would, he knew, be absorbed by the British Government on his death, and his widows be left to depend on its bounty. As before

ಒಂದು ಕಾರಣದಿಂದ ಬ್ರಿಟಿಷರು ಕಬಳಿಸುತ್ತಿರುವುದವನಿಗೆ ಭರಿಸಲಾಗದ ರೋಷಾವೇಶವನ್ನುಂಟುಮಾಡಿತು; ಅದು ಬದ್ಧದ್ವೇಷದ ರೂಪವನ್ನು ತಾಳಿತು. ಬ್ರಿಟಿಷ್ ವಿರುದ್ಧ ಬಂಡಾಯವನ್ನೆಬ್ಬಿಸಲು ಮನಸ್ಸುಮಾಡಿದ. ಆದರೆ ಬ್ರಿಟಿಷರ ಬಲವನ್ನಿವನು ಚೆನ್ನಾಗಿ ಅರಿತವನಾಗಿ, ಸಮಯ ಬರಲೆಂದು ಕಾಯುತ್ತಿದ್ದ.

ಅನೇಕ ಕಾರಣಗಳಲ್ಲಿ ದತ್ತುಸ್ವೀಕಾರ ಸಮಸ್ಯೆಯು ಮಹಾಕಾರಣವಾಗಿ ಉತ್ತರ ಭಾರತವೆಲ್ಲ ಮಹಾಅಗ್ನಿಪರ್ವತವೆನಿಸಿತ್ತು. ಒಳಗೊಳಗೇ ಬ್ರಿಟಿಷ್ ವಿರುದ್ಧ ವಿಪದಗ್ನಿಯು ಜ್ವಲಿಸುತ್ತಿತ್ತು. ಕ್ರಾಂತಿಯ ಪಾಂಚಜನ್ಯ ಮೊಳಗುವುದರಲ್ಲಿತ್ತು. ನಾನಾ ಸಾಹೇಬನ ಕ್ರಾಂತಿದೂತರು ದಕ್ಷಿಣ ದೇಶದಲ್ಲೆಲ್ಲ ರಹಸ್ಯವಾಗಿ, ಚಪಾತಿಗಳನ್ನು ಹಂಚುತ್ತಾ ಹೊರಟರು. ನರಗುಂದಕ್ಕೂ ಕ್ರಾಂತಿಯ ಚಪಾತಿಗಳು ಬಂದವು. ಕ್ರಾಂತಿಗೆ ಸಿದ್ಧಹೃದಯನಾಗಿದ್ದ ಬಾಬಾ ಸಾಹೇಬ ಪಿತೂರಿಗಾರಂಭಿಸಿದ. ದಕ್ಷಿಣ ಭಾರತದ ದೊಡ್ಡ, ಪುಟ್ಟ ಸಂಸ್ಥಾನಿಕರೊಂದಿಗೆಲ್ಲ ರಹಸ್ಯ ಸಂಪರ್ಕವನ್ನಿಟ್ಟುಕೊಂಡ; ಪತ್ರವ್ಯವಹಾರ ನಡೆಸಿದ. ಮುಂಡರಿಗಿ ಭೀಮರಾಯ, ಹಮ್ಮಿಗಿಯ ಕೆಂಚನಗೌಡ, ಸೊರತೂರು ಗೋವಿನಕೊಪ್ಪದ ದೇಸಾಯಿಗಳು, ಮೊದಲಾದವರಿಗೆಲ್ಲ ಪತ್ರಗಳು ಹೋದವು. ದೊಗಲು ದೋಸಿ ಇನಾಂದಾರ, ಆನೆಗೊಂದಿಯ ಶ್ರೀರಂಗರಾಯ, ಧಾರವಾಡದ ಸುತ್ತಮುತ್ತಣ ದೇಸಾಯಿಗಳು, ಇವರೆಲ್ಲ ಬಾಬಾ ಸಾಹೇಬನಿಗೆ ನೆರವಾಗಲೊಪ್ಪಿದರು. ಇವೆಲ್ಲ ದರಬಾರುಗಳಲ್ಲೂ ಕ್ರಾಂತಿದೂತರು ಸಾಕಾದಷ್ಟು ಕೆಲಸ ಮಾಡಿದ್ದರು. ಎಲ್ಲರೂ ಸೇರಿ ಏಕಕಾಲದಲ್ಲಿ ದಂಗೆಯೇಳತಕ್ಕದ್ದೆಂದು ನಿರ್ಣಯವಾಗಿತ್ತು. ಥಾಣಸಂಸ್ಥಾನದ ಸೆರೆಮನೆಯಲ್ಲಿ ಸವೆಯುತ್ತಿದ್ದ ಕೇಶವದಯಾಳ್ ತಿವಾರಿಯೂ ಬಾಬಾ ಸಾಹೇಬನಿಗೆ ಸಹಕಾರಹಸ್ತ ನೀಡಿ ಸುದ್ದಿ ಕಳುಹಿಸಿದ. ಇವನು ಹಿಂದೆ ಹಿಂದೂ ಸೈನ್ಯದ ತುಕಡಿಯೊಂದರ ಹವಾಲದಾರನಾಗಿದ್ದ. ಸೈನಿಕರೆಲ್ಲ ಒಂದುಕಡೆ ಬಂಡೇಳುವ ಹಾಗೆ ವ್ಯವಸ್ಥೆಯಾಗಿತ್ತು. ಕೈಗೆ ಸಿಕ್ಕಿದ ಪರಂಗಿಯವರನ್ನು ಕೊಲ್ಲಬೇಕು; ಊರುಗಳನ್ನು ಲೂಟಮಾಡಬೇಕು; ಬಾಬಾ ಸಾಹೇಬನ ನಾಯಕತ್ವವನ್ನು ಎಲ್ಲರೂ ಅಂಗೀಕರಿಸಬೇಕು; ಹೀಗೆ ನಿಶ್ಚಯವಾಯಿತು.

ನರಗುಂದದ ಬಾಬಾಸಾಹೇಬ ತನ್ನ ಬ್ರಿಟಿಷ್ ವೈರವನ್ನು ಹೊರಪಡಿಸಲಿಲ್ಲ. ಅವನ ಹೊರಗಣ ನಡೆ ನುಡಿಗಳೆಲ್ಲ ಸ್ನೇಹಪೂರಿತವಾಗಿಯೇ ಇದ್ದುವು. ರಹಸ್ಯಾಲೋಚನೆಗಳೂ, ಯೋಜನೆಗಳೂ, ಮುಂದುವರಿಯುತ್ತಿದ್ದವು. ಜಿಲ್ಲಾಧಿಕಾರಿ ಥಾಮಸ್ ಓಗಲ್ವಿ ಬಾಬಾಸಾಹೇಬನನ್ನು ಕರೆಸಿಕೊಂಡು 'ಜಿಲ್ಲೆಯಲ್ಲೇನಾದರೂ

---

observed, Mr. Manson as Inam Commissioner had incurred much ill-will, and it was he who had extracted from the Nurgoondkur the promise to surrender his guns naturally looked on as a degradation. He was therefore identified with the policy of our Government in its harsher features, and became an acceptable sacrifice to the native discontent: but his relatives and friends have the consolation of knowing that he lost his life in the endeavour to save that of others . . . . "

—*Western India Before and During the Mutinies*, by Major General Sir George Le Grand Jacob, p. 227.

ದಂಗೆ ತಲೆ ಹಾಕಿದರೆ ಸರಕಾರಕ್ಕೆ ನೆರವಾಗಬೇಕು' ಮುಂತಾಗಿ ಹೇಳಿದ. ಬಾಬಾ ಸಾಹೇಬ ಸಹಕಾರ ಕೊಡುವುದಾಗಿ ಭರವಸೆಕೊಟ್ಟ. ಜಿಲ್ಲೆಯಲ್ಲಿ ಏನೇನು ನಡೆಯುತ್ತಿದೆ; ಯಾರು ಯಾರು ಏನೇನು ಮಾಡುತ್ತಿದ್ದಾರೆ; ಇವೆಲ್ಲ ಅಧಿಕಾರಿಗಳಿಗೆ ತಿಳಿಯದೆ ಇರಲಿಲ್ಲ. ಬಾಬಾಸಾಹೇಬನ ಮೇಲೆ ಅವರ ಕಣ್ಣಿದ್ದೇ ಇತ್ತು. ಆದರೆ ಬಹಿರಂಗವಾಗಿ ಅವನನ್ನು ಎದುರುಹಾಕಿಕೊಳ್ಳಲು ಅವರು ಇಷ್ಟಪಡಲಿಲ್ಲ. ಅರೆ ಭಯ; ಅರೆ ಎಚ್ಚರಿಕೆ.

ನರಗುಂದ ದುರ್ಗ ಭದ್ರವಾದುದು; ಎತ್ತರವಾದ ಬೆಟ್ಟದ ಮೇಲಿದ್ದು, ಬಂಡಾಯಗಾರರಿಗೆ ಬಹಳ ಅನುಕೂಲವಾಗಿತ್ತು. ಅಲ್ಲಿ ಮದ್ದುಗುಂಡನ್ನು ಶೇಖರಿಸುವುದು ಬ್ರಿಟಿಷರಿಗೇ ಅಪಾಯಕರ. ಯಾವ ಕ್ಷಣದಲ್ಲಿ ದಂಗೆಯಾರಂಭವಾಗುವುದೋ ಎಂಬ ಭೀತಿ ಪ್ರತಿಕ್ಷಣವೂ ಅವರನ್ನು ಬಾಧಿಸುತ್ತಿತ್ತು. ಆದುದರಿಂದ ಅಧಿಕಾರಿಗಳು ಬಾಬಾಸಾಹೇಬನಿಗೆ "ನರಗುಂದ ದುರ್ಗದಲ್ಲಿರುವ ಮದ್ದು ಗುಂಡು ಮೊದಲಾದ ಸಂಗ್ರಾಮ ಸಲಕರಣೆಗಳನ್ನೆಲ್ಲಾ ಧಾರವಾಡಕ್ಕೆ ಸಾಗಿಸಬೇಕು" ಎಂಬದಾಗಿ ಆಜ್ಞೆ ಮಾಡಿದರು. ಅನುಮಾನಕ್ಕಾಸ್ಪದ ಕೊಡಬಾರದೆಂದು ಆಲೋಚಿಸಿ, ಬಾಬಾಸಾಹೇಬ, ಕೊಟ್ಟ ಆಜ್ಞೆಯನ್ನು ಪಾಲಿಸಿದ. ಆದರೆ ದುರ್ಗದಲ್ಲಿ ಮೂರು ತೋಪುಗಳನ್ನು ಉಳಿಸಿ, ಮತ್ತೆಲ್ಲ ಸಾಮಗ್ರಿಯನ್ನೂ ಕಳುಹಿಸಿದ. ಅದೇ ಸಮಯದಲ್ಲೇ ತನ್ನವರು ಮಧ್ಯದಾರಿಯಲ್ಲಿ, ಕಳುಹಿಸಿದ ಸಾಮಾನುಗಳನ್ನೆಲ್ಲ ದೋಚುವಂತೆ ಏರ್ಪಾಟು ಮಾಡಿದ. ಸಾಮಾನನ್ನು ಸಾಗಿಸಲಿಕ್ಕಾಗಿ ನೇಮಕವಾಗಿದ್ದ ಸೇನಾನಿ ಲೆಸ್ಟರ್, ಜೇಕಬನಿಗೆ ಹೀಗೆ ತಂತಿ ವರ್ತಮಾನ ಕಳುಹಿಸಿದ:

> "ನರಗುಂದದ ಒಡೆಯನು ಧಾರವಾಡದ ಕಡೆಗೆ ನಡೆದಿರುವ ಬಂಡಾಯಕ್ಕೆ ನೆರವಾಗುತ್ತಿದ್ದಾನೆ. ನಮ್ಮ ಕಡೆಗೆ ಒಪ್ಪಿಸಿದ ತನ್ನ ಎಲ್ಲ ಶಸ್ತ್ರಗಳನ್ನೂ ಅವನ ಕಡೆಯವರು ದಾರಿಯಲ್ಲಿ ನಮ್ಮ ಮೇಲೆ ಬಿದ್ದು ಅವೆಲ್ಲವುಗಳನ್ನೂ ದೋಚಿಕೊಂಡು ಹೋದರು. ನಮ್ಮಲ್ಲಿ ಅನೇಕ ಜನರು ಗಾಯಗೊಂಡಿದ್ದಾರೆ." [29]

ಇದ್ದಕ್ಕಿದ್ದಹಾಗೆ ಬ್ರಿಟಿಷರು ತನ್ನ ಕಡೆಯಿಂದ ಶಸ್ತ್ರಾಸ್ತ್ರಗಳನ್ನು ತರಿಸಿಕೊಂಡದ್ದನ್ನು ದೇಸಾಯಿ ಕುರಿತಾಲೋಚನೆಮಾಡಿದ. ಆಶ್ಚರ್ಯವೇನಾಗಲಿಲ್ಲ. ಸರಕಾರ ವಿರುದ್ಧವಾದ ನನ್ನ ಯೋಚನೆ ಯೋಜನೆಗಳೆಲ್ಲ ಅವರಿಗೆ ಗೊತ್ತಾಗಿರಬೇಕೆಂದು ಖಚಿತಮಾಡಿಕೊಂಡ.

ಇದಾದ ಹದಿನೈದು ದಿನಗಳೊಳಗಾಗಿ ರಾಜಕೀಯ ಪ್ರತಿನಿಧಿ ಮ್ಯಾನ್ಸನ್ನನಿಗೆ ಒಂದು ಪತ್ರ ಬಂತು.

> "ಧಾರವಾಡ ಜಿಲ್ಲೆಯ ಗದಗ್ ಎಂಬಲ್ಲಿ ಮುಂಡರಗಿ ಭೀಮರಾಯ, ಹಮ್ಮಿಗಿ ದೇಸಾಯಿ ಕೆಂಚನಗೌಡ ಬಂಡಾಯವನ್ನೆಬ್ಬಿಸಿದ್ದಾರೆ. ಅದರಲ್ಲಿ ನರಗುಂದ ದೇಸಾಯಿ ಬಾಬಾಸಾಹೇಬನ ಕೈವಾಡವೂ ಇರಬೇಕು." [30]

---

29 '೧೮೫೭' 'ನರಗುಂದದ ಬಂಡಾಯ' ಕೃ. ಗೋ. ಜೋಷಿ, ಪು. ೩೧೮.

30 F. M. C., Bombay.

ಎಂಬದಾಗಿ ಬರೆದಿತ್ತು. ಹೇಗಾದರೂ ಮಾಡಿ ಬಾಬಾಸಾಹೇಬ ಬಂಡಾಯಗಾರರಿಗೆ ನೆರವಾಗದಂತೆ ಮಾಡಬೇಕೆಂದಾಲೋಚಿಸಿ ಮ್ಯಾರ್ಸರ್ ನರಗುಂದದ ಕಡೆ ಹೊರಟ.

ಈ ವಿಚಾರವಾಗಿ ಜೇಕಬನು ಹೇಳುವದನ್ನೂ ಕೇಳಬೇಕು:

"ನನ್ನ ದೂತ ಮ್ಯಾರ್ಸನ್ನನ್ನು ಕುರಂದವಾಡದಲ್ಲಿ ಕಂಡ. 'ನಾನು ಆದಷ್ಟು ಬೇಗ ಒಳದಾರಿ ಹಿಡಿದು ನರಗುಂದಕ್ಕೆ ಹೋಗುತ್ತೇನೆ. ಅಲ್ಲಿ ಬಂಡಾಯ ಪ್ರಯತ್ನಗಳನ್ನು ಆರಂಭ ದೆಸೆಯಲ್ಲೇ ಧ್ವಂಸ ಮಾಡುತ್ತೇನೆ. ಮುಂದೆ ಯಾವ ದುಷ್ಕರ್ಮಗಳೂ ಆಗದಂತೆ ನೋಡಿಕೊಳ್ಳುತ್ತೇನೆ. ಹೀಗೆ ಮಾಡಲು ಒಂದು ವೇಳೆ ತಡವಾದರೆ ನರಗುಂದಕರನ ಬಂಧು ರಾಮದುರ್ಗದ ಒಡೆಯನನ್ನು ಸೇರಿ, ಅವನನ್ನು ಕಾಪಾಡುವೆನೆಂಬ ನಂಬಿಕೆ ನನಗಿದೆ' ಯೆಂಬದಾಗಿ ನನಗೆ ತಿಳಿಸಿದ. ನನ್ನ ಪತ್ರ ಅವನಿಗೆ ಹೋದ ಕೂಡಲೆ ಗಲಾಟೆಗಳ ಕ್ಷೇತ್ರಕ್ಕೆ ಹೋಗುವ ದಾರಿಯುದ್ದಕ್ಕೂ ಸವಾರರನ್ನು ಹಾಕಿದ; ತಾನೂ ಹೊರಟ." 31

"ಮಹಾ ವೇಗದಿಂದ ಹೊರಟ; ತನ್ನೊಂದಿಗಿದ್ದ ಪರಿವಾರ ದವರನ್ನೂ ಪದಾತಿಯನ್ನೂ ಹಿಂದೆಯೇ ಬಿಟ್ಟು, ಕೊಲ್ಲಾಪುರದ ದಕ್ಷಿಣ ಮರಾಠಾ ಅಶ್ವದಳದ ಹನ್ನೆರಡು ಮಂದಿ ಸವಾರರೊಂದಿಗೆ

---

31 " . . . . My messenger reached him at Koorundwar, and from thence brought me reply that by cutting across country he could get so soon to Nurgoond as perhaps to nip the evil in the bud and prevent further mischief; but that if too late to effect this, he felt confident in being able to save the Nurgoondkur's half-brother, the chief of Ramdroog from joining. From the moment of my letter reaching him he had posted horses along the road to proceed to the threatened quarter . . . . . "

"On he went with great rapidity, leaving his infantry escort and establishment behind, and only taking with him a dozen troopers of the S. M. Horse, given him at Kolapoor. His hope was that a letter he had despatched to Colonel Malcolm, commanding at Kaludgee, requesting junction at Ramdroog with a large body of his own regiments, the S. M. Horse, would have been received in time to effect this purpose, but on the alarm reaching that station, Colonel Malcolm with his usual promptitude had taken the field with 250 horse to attack the insurgents, who had plundered the treasury of one of the district's stations of Dharwar; and Mr. Manson therefore reached Ramdroog with no other protection than his nearly worn out troopers. From this place he sent me a few hurried lines, the last probably he ever wrote. 'I have come too late,' he said '—I quote from memory,—the Noorgunkar has thrown down the gauntlet and committed himself past hope of recovery, but I think I have saved the Ramdroogkur who has shown me his brother's letters urging co-operation. He compels me not to go to Nurgoond, as in this case he will not answer for my life, so I go on to join Malcolm, who has gone southward after the

ಮಾತ್ರ ಪ್ರಯಾಣ ಮಾಡಿದ. ಕರ್ನಲ್ ಮಾಲ್ಕಂಗೆ ಕಲಾದ್ಗಿಗೆ ಪತ್ರ ಕಳುಹಿಸಿ, ತಮ್ಮ ಸೈನ್ಯ ಪಡೆಗಳೊಂದಿಗೆ ರಾಮದುರ್ಗದಲ್ಲಿ ನನ್ನನ್ನು ಸೇರಿಯೆಂದು ಕೇಳಿದ್ದ. ಅಷ್ಟರಲ್ಲಿ ಭಯಂಕರ ಸುದ್ದಿ ಬರಲು ಕರ್ನಲ್ ಮಾಲ್ಕಂ ತಕ್ಷಣ, ೨೫೦ ಮಂದಿ ಸವಾರರೊಂದಿಗೆ ಧಾರವಾಡ ಜಿಲ್ಲೆಯ ಖಜಾನೆಗಳನ್ನು ಲೂಟಿಮಾಡಿದ. ಬಂಡಾಯಗಾರರನ್ನು ಎದುರಿಸಲು ಹೊರಟ. ಆದಕಾರಣ ಮ್ಯಾನ್ಸನ್ ಯಾವ ಸಂರಕ್ಷಣೆಯೂ ಇಲ್ಲದೆ ದುಡಿದು, ಬೇಸತ್ತ ಸೈನಿಕರೊಂದಿಗೆ ರಾಮದುರ್ಗ ಸೇರಿದ. ಅಲ್ಲಿಂದ ಅವಸರವಸರವಾಗಿ ಕೆಲವು ಪಂಕ್ತಿಗಳನ್ನು ಬರೆದ—ಅವನು ಬರೆದದ್ದು ಅದೇ ಕಡೆ—'ನಾನು ಬಂದದ್ದು ತಡವಾಯಿತು. ನರಗುಂದಕರನು ಸಂಕಲ್ಪಮಾಡಿ, ವಜ್ರ ಮುಷ್ಟಿಯನ್ನಾಡಿಸಿ ಬಿಟ್ಟಿದ್ದಾನೆ. ಆದರಿಂದವನು ಉಳಿಯುವ ಹಾಗಿಲ್ಲ. ಆದರೆ ನಾನು ರಾಮದುರ್ಗಕರನನ್ನು ಕಾಪಾಡಿದೆನೆಂದು ನಂಬಿದ್ದೇನೆ. ಅವನ ಸಹೋದರ ನರಗುಂದಕರನು ಸಹಕಾರ ಬೇಡಿ ಬರೆದ ಪತ್ರಗಳನ್ನು ನನಗೆ ತೋರಿಸಿದ. ಅವನು ನಾನು ನರಗುಂದಕ್ಕೆ ಹೋಗಬಾರದೆಂದು ಒತ್ತಾಯ ಮಾಡುತ್ತಿದ್ದಾನೆ; ಇದರಿಂದ ನಿಮ್ಮ ಜೀವ ಹೋದರೆ ನಾನದಕ್ಕೆ ಹೊಣೆಯಲ್ಲವೆಂದು ಹೇಳುತ್ತಿದ್ದಾನೆ. ಆದ್ದರಿಂದ, ಬಂಡಾಯಗಾರರನ್ನೆದುರಿಸಲು ದಕ್ಷಿಣದ ಕಡೆ ಹೊರಟ ಮಾಲ್ಕಂನನ್ನು ಸೇರಿಕೊಳ್ಳಲು ನಾನು ಹೋಗುತ್ತೇನೆ. ನನ್ನ ಸ್ನೇಹಿತ ಪೂರ್ಣಸಿಂಗ್ ಮಾತ್ರ ಹಲವು ಸವಾರರೊಂದಿಗೆ

---

rebels. My friend Poorun Sing, with a couple of horsemen, alone joined me here from Kaldugee. You should lose no time in putting an European garrison into Meeruj or Sanglee.

" That night, May 20 he pressed forward and halted at the little village of Sooreban, all parties probably exhausted from this rapid marching. No circumstantial account of what followed has ever transpired further than that about midnight, whilst all were asleep, the Noorgund chief sallied out with seven or eight hundred followers, horse and foot ; and approaching close to the spot where his unsuspecting victims were lying poured in a valley which killed the sentry, and rushed in to finish the work with the sword. Mr. Manson, roused from sleep in his palkee, fired his revolver at his assailants wounding one but was immediately over-powered, his head cut off and his body thrown into the still burning fire that had been kindled by his little party. Having killed all he could lay hands on, the chief returned with his bloody trophy to Nurgoond, where the head was suspended over a gateway. Some half-dozen straglers effected their escape in the dark, but Poorunsing one of the best and most faithful officers of the S. M. Horse fell with the young Englishman. "

—*Western India Before and During the Mutinies*, by Major General Sir George Le Grand Jacob, pp. 221-224.

ಕಲಾದ್ಗಿಯಲ್ಲಿ ನನ್ನನ್ನು ಸೇರಿದ. ಮಿರಜ್‌ನಲ್ಲೋ, ಸಾಂಗ್ಲಿಯಲ್ಲೋ, ಐರೋಪ್ಯ ಪಡೆಯನ್ನಿಡುವ ಕೆಲಸದಲ್ಲಿ ನೀವು ತಡಮಾಡಬಾರದು.

"ಆ ರಾತ್ರಿ, ಮೆ ೨೦ನೇ ದಿನ, ಮುಂದೆ ಮುಂದೆ ನುಗ್ಗಿ ಬಂದ; ಸೂರೆಬಾ‌ನ್ ಎಂಬ ಸಣ್ಣಹಳ್ಳಿಯಲ್ಲಿ ತಂಗಿದ. ಅವಸರವಸರವಾಗಿ ದಾರಿ ನಡೆದು ಜನರೆಲ್ಲ ತತ್ತರಿಸಿಹೋಗಿದ್ದರು. ಅನಂತರ ಏನೇನಾಯಿತೋ ನಿಕರವಾಗಿ ಗೊತ್ತಿಲ್ಲ. ಎಲ್ಲರೂ ನಿದ್ದೆಹೋಗುತ್ತಿದ್ದರು; ಮಧ್ಯರಾತ್ರಿ; ನರಗುಂದಕರ ೭೦೦-೮೦೦ಮಂದಿ ಅಶ್ವದಳ, ಪದಾತಿಯೊಂದಿಗೆ ಧಾವಿಸಿ, ಸರ‍್ರನೆ ಬಂದ. ಗುಂಡುಗಳನ್ನು ಹಾರಿಸಿದ. ಕಾವಲುಗಾರ ಸತ್ತು ಬಿದ್ದ. ನರಗುಂದಕರ ಕಡೆಯವರು ಮುನ್ನುಗ್ಗಿ ಕತ್ತಿ ಹಿರಿದು, ತಮ್ಮ ಕೆಲಸ ಪೂರೈಸಲನುವಾದರು. ಪಾಲ್ಕಿಯಲ್ಲಿದ್ದ ಮ್ಯಾ‌ಸನ್ನನಿಗೆ ಎಚ್ಚರವಾಯಿತು. ರಿವಾಲ್ವರನ್ನೆಳೆದು, ಹಂತಕರ ಕಡೆಗೆ ಗುರಿಯಿಟ್ಟು, ಹೊಡೆದು, ಗಾಯಗೊಳಿಸಿದ. ಅಷ್ಟರಲ್ಲೇ ಹಂತಕರವನನ್ನು ಉರುಳಿಸಿದರು. ಅವನ ತಲೆಯನ್ನು ಕತ್ತರಿಸಿದರು. ಮಾ‌ರ್ಸ‌ಕಡೆಯವರೇ ಹಚ್ಚಿದ್ದ ಬೆಂಕಿಯಿನ್ನೂ ಉರಿಯುತ್ತಿತ್ತು. ಮ್ಯಾ‌ಸನ್ನನ ಮುಂಡವನ್ನಾ ಬೆಂಕಿಗೆ ಹಾಕಿಬಿಟ್ಟರು. ನರಗುಂದ ಸಂಸ್ಥಾನಿಕ ಸಿಕ್ಕಿದವರನ್ನೆಲ್ಲ ಕೊಂದು, ತನ್ನ ವಿಜಯ ಲಾಂಛನವಾದ ರಕ್ತರುಂಡವನ್ನು ನರಗುಂದಕ್ಕೊಯ್ದು; ಕೋಟೆಯ ಮಹಾದ್ವಾರಕ್ಕಾ ರುಂಡವನ್ನು ನೇತುಹಾಕಿದ. ಕತ್ತಲಲ್ಲಿ ಕೆಲವರು ಮಾತ್ರ ತಪ್ಪಿಸಿಕೊಂಡು ಹೋದರು. ಆದರೆ ತರುಣ ಆಂಗ್ಲನೊಂದಿಗೆ ದಕ್ಷಿಣ ಮಹಾರಾಷ್ಟ್ರ ಅಶ್ವದಳದ ಅಧಿಕಾರಿಗಳಲ್ಲಿ ಉತ್ತಮ ಮತ್ತು ಅತ್ಯಂತ ಸ್ವಾಮಿಭಕ್ತ ಪೂರ್ಣಸಿಂಗನೂ ಬಿದ್ದ."

ಸೂರೇಬಾನಿನಿಂದ ಹಿಂದಿರುಗಿದ ಬಾಬಾ ಸಾಹೇಬ ಮ್ಯಾ‌ಸನ್ನನ ಬಳಿ ಇದ್ದ ಕಾಗದಪತ್ರಗಳನ್ನೆಲ್ಲ ನೋಡಿದ. ಬನ್ಯಾಬಾಪು, ಕೃಷ್ಣಾಜಿ ಪಂತ ಜೋಶಿ ಮುಂತಾದ ದೇಶದ್ರೋಹಿಗಳು ತನ್ನ ಗುಪ್ತ ಕಾರಾಗಾರಗಳನ್ನೆಲ್ಲ ಬ್ರಿಟಿಷರಿಗೆ ತಿಳಿಸಿದ್ದರೆಂಬುದನ್ನರಿತು ಭಯಗೊಂಡ. ಮದ್ದಿನ ಮನೆಗಳಿಗೆ ದೇಶದ್ರೋಹಿಗಳು ಸಗಣಿ ತುಂಬಿರುವುದನ್ನು ಕಂಡು ಮರುಗಿದ. ಅವರನ್ನು ಹಿಡಿದು ದಂಡಿಸಲು ಸಮಯವಿಲ್ಲ. ಮನಸ್ಸು ಗಟ್ಟಿಮಾಡಿದ. ಇದ್ದದ್ದರಲ್ಲೇ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡು, ಅಮರಗಾಲಿನ ಕೋಟೆಯನ್ನು ಮುತ್ತಿಗೆಹಾಕುವ ಸನ್ನಾಹದಲ್ಲಿದ್ದ. ಮಾಲ್ಕಮನ ಸೈನ್ಯದ ಮೇಲೆ ಬಿದ್ದ. ಕಾಳಗ ಮೊದಲಾಯಿತು. ಸುಧಾರಿತ, ಸುಸಜ್ಜಿತ, ಬ್ರಿಟಿಷ್ ಸೈನ್ಯದ ಮುಂದೆ ಬಾಬಾ ಸಾಹೆಬನ ಸೈನ್ಯವೆಲ್ಲಿ. ಸೈನ್ಯ ಹಿಮ್ಮೆಟ್ಟಿತು. ಮುಂಡರಗಿ ಭೀಮರಾಯನ ಕಡೆಯಿಂದ ಸಹಾಯ ನಿರೀಕ್ಷಿಸಿದ್ದ. ಅವರು ಕೊಪ್ಪಳದ ಕಡೆ ಹೋರಾಡುತ್ತಿದ್ದರು. ಅವರ ಕಡೆಯಿಂದ

"ಇನ್ನು ಮೂರು ನಾಲ್ಕು ದಿನ ಹೋರಾಡುತ್ತಿರು. ಅನಂತರ ನಿನ್ನ ಸಹಾಯಕ್ಕೆ ಸೈನ್ಯ ಕಳುಹಿಸಿ ಕೊಡುತ್ತೇವೆ"

ಎಂಬ ಪತ್ರ ಮಾತ್ರ ಬಂತು.

ಮಾಲ್ಕಮನು ಕೊಪ್ಪಳದ ಕೆಲಸ ಮುಗಿಸಿ, ಧಾರವಾಡ ಸೈನ್ಯವನ್ನು ಕೂಡಿಸಿಕೊಂಡು, ಜೂನ್ ಒಂದನೆ ತಾರೀಖಿನ ದಿನ ನರಗುಂದವನ್ನು ಮುತ್ತಲು ಬಂದ. ಕೋಟೆಯ ಹೊರಗೇ ಉಭಯ ಪಕ್ಷದವರಿಗೂ ಘೋರ ಕದನವಾಯಿತು. ನರಗುಂದದ ಸೈನಿಕರನೇಕರು ಸತ್ತರು. ಬ್ರಿಟಿಷರು ನರಗುಂದ ಕೋಟೆಯ ಲಗ್ಗೆ ಹತ್ತಿದರು. ಮಾರನೆಯ ದಿನ ಕೋಟೆಯು ಪೂರ್ಣ ಅವರ ಕೈವಶವಾಯಿತು.

ಕೋಟೆಯ ಬಾಗಿಲುಗಳನ್ನು ತೆರೆದು ನೋಡಿದಾಗ ಊರು ಬರಿದಾಗಿತ್ತು. ರಾತ್ರಿಯೇ ಬಾಬಾ ಸಾಹೇಬ ಮಾಯವಾಗಿ ಹೊಗಿದ್ದ. ಬಲಯುತರಾದ ಬ್ರಿಟಿಷರನ್ನಾಗ ಎದುರಿಸಿ ಪ್ರಯೋಜನವಿಲ್ಲವೆಂದರಿತ ಬಾಬಾ ಸಾಹೇಬ. ಅತ್ಯಂತ ಆಪ್ತರಾದ ಗಂಗಾಧರ ಚಿಂತಾಮಣಿ, ಅಣ್ಣಾ ಸಹಸ್ರಬುದ್ಧೆ, ಪುರಚೂರು ಬಸ್ಸಾಜಿ ತಂಬಾ, ಹನುಮಂತ ಬುರೇಗಲ್, ಬಾಬಾಜಿ ಜಾಂಬಿಯಾ, ಮೊದಲಾದವರೊಂದಿಗೆ ಕೋಟೆಯಿಂದ ಹೊರಟ. ತೊರಗಲ್ ಸಂಸ್ಥಾನ ಸೇರಿ, ಅಲ್ಲಿನ ಒಂದು ಕಾಡಿನಲ್ಲಿ ತಲೆ ಮರೆಸಿಕೊಂಡ.

ಬಾಬಾ ಸಾಹೆಬ ನರಗುಂದ ಬಿಟ್ಟಕೂಡಲೆ ದಾರಿಯಲ್ಲಿ ಲಕ್ಷ್ಮಣರಾವ್ ಜಗತಾಪೆ ಎಂಬವನು ಈ ಗುಂಪನ್ನು ಸೇರಿಕೊಂಡ. ಇವನ ಮೇಲೆ ಯಾರಿಗೂ ಸಂಶಯ ಹುಟ್ಟಲಿಲ್ಲ. ಬಾಬಾ ಸಾಹೇಬರು ಗೋಸಾಯಿಯಂತೆ ವೇಷಹಾಕಿಕೊಂಡು ನಿರ್ಭಯವಾಗಿ ಪಂಡರಾಪುರಕ್ಕೆ ಹೋಗಬಹುದೆಂದು ಅವನು ಸೂಚನೆ ಮಾಡಿದ. ವೇಷಕ್ಕೆ ತಕ್ಕ ವಸ್ತ್ರಾಲಂಕಾರಗಳನ್ನು ತರುವೆನೆಂದು ಹೇಳಿ ಹೊರಟ. ಬಾಬಾ ಸಾಹೇಬನಲ್ಲೆ ಹಿಂದೆ ಚಾಕರಿಯಲ್ಲಿದ್ದು, ವಿಶ್ವಾಸಗಳಿಸಿದ್ದ ಜಗತಾಪೆಯ ಮಾತಿಗೆ ಬಾಬಾ ಸಾಹೇಬನೂ, ಇತರರೂ, ಮರುಳಾದರು.

ಕೋಟೆಯಿಂದ ಬಾಬಾ ಸಾಹೇಬ ತಪ್ಪಿಸಿಕೊಂಡು ಹೋದನೆಂದು ತಿಳಿದ ಕೂಡಲೆ ಅಧಿಕಾರಿಗಳು ಎಚ್ಚರಾಗಿ ನಾಲ್ಕು ಕಡೆಗೂ ಸೈನಿಕರನ್ನೂ, ಚಾರರನ್ನೂ, ಅಟ್ಟಿದರು. ಅವನೆಲ್ಲಿದ್ದರೂ ಭೇದಿಸಿ, ಹಿಡಿತರಬೇಕೆಂದು ಕಟ್ಟಾಜ್ಞೆಮಾಡಿದರು, ಪೋಲೀಸ್ ಅಧಿಕಾರಿ ಸೌಟರ್ ಎಂಬವನಂತೂ ಅಪೂರ್ವ ಶಕ್ತಿ, ಸಾಹಸ, ಚಮತ್ಕಾರ, ತೋರಿಸಿ ಕೆಲಸ ಮಾಡಿದ. ಏನೂ ಪ್ರಯೋಜನವಾಗಲಿಲ್ಲ. ಕಾಷಾಯ ವಸ್ತ್ರ ತರುವೆನೆಂದು ಬಾಬಾ ಸಾಹೆಬನಿಗೆ ವಚನಕೊಟ್ಟು ಹೋದ ಲಕ್ಷ್ಮಣರಾವ್ ಜಗತಾಪೆ ಸೌಟರಿಗೆ ಹೋಗಿ ಸುದ್ದಿಕೊಟ್ಟ. ಸರಿ; ತಕ್ಷಣ ಸೌಟರು ಕಾಡಿನ ರಹಸ್ಯ ಸ್ಥಳಕ್ಕೆ ಬಂದ; ಬಾಬಾ ಸಾಹೇಬ ಮತ್ತು ಅವನ ಸಂಗಡಿಗರನ್ನೆಲ್ಲ ೨ನೇ ತಾರೀಖಿನ ದಿನ ಹಿಡಿದ. ಅವರನ್ನೆಲ್ಲ ಬೆಳಗಾಂವಿಗೆ ಕರೆದೊಯ್ದರು. ವಿಚಾರಣೆ ನಡೆಸಿದರು; ಮರಣದಂಡನೆ ವಿಧಿಸಿದರು; ೧೨-೬-೧೮೫೮ನೇ ದಿನ ಬಾಬಾ ಸಾಹೇಬನನ್ನು ಗಲ್ಲಿಗೇರಿಸಿದರು.

ಶತ್ರುಗಳ ಕೈಗೆ ಸಿಕ್ಕಿ ಅವಮಾನಕ್ಕೀಡಾಗುವುದಕ್ಕಿಂತ ಮರಣವನ್ನಪ್ಪುವುದೇ ಧರ್ಮವೆಂದು ತಿಳಿದರು ಬಾಬಾ ಸಾಹೆಬನ ವೀರಮಾತೆ ಯಮುನಾಬಾಯಿ ಮತ್ತು ವೀರಪತ್ನಿ ಸಾವಿತ್ರೀಬಾಯಿ. ಸತ್ತ ಸುದ್ದಿ ಕೇಳುತ್ತಲೇ ಇಬ್ಬರೂ ಮಲಪ್ರಭಾ ಪುಣ್ಯೋದಕದಲ್ಲಿ ಬಿದ್ದು, ವೀರಸ್ವರ್ಗ ಸೇರಿದರು.

ಹೀಗೆ ಮುಕ್ತಾಯವಾಯಿತು ನರಗುಂದದ ವೀರ ಕಥೆ. ಇದೆಷ್ಟು ಮಟ್ಟಿಗೆ ವೀರ ಕಥೆಯೋ ಅಷ್ಟೇ ಮಟ್ಟಿಗೆ ದ್ರೋಹಿಗಳ ಕಥೆಯೂ ಹೌದು.

---

## ೩. ರಣವಿಕ್ರಾಂತ ಭೀಮರಾವ್ ಮುಂಡರಗಿ

ಭಾರತದ ಇತಿಹಾಸದಲ್ಲಿ ೧೮೫೭ನೆಯ ಇಸ್ವಿಯು ಮಹತ್ಸ್ಫೂರಿತವಾದುದು. ಇದು ಪ್ರಥಮ ಮತ್ತು ಅಂತಿಮ ಸಶಸ್ತ್ರ ಹೋರಾಟ. ಅಲ್ಲಿಂದೀಚೆಗೆ ಸ್ವಾತಂತ್ರ್ಯ ಚಳುವಳಿಯ ರೂಪವು ಬದಲಾಯಿಸಿತು. ಪರಕೀಯ ವಸ್ತುಗಳ ನಿಷೇಧ, ಹರತಾಳ, ಸ್ವದೇಶಿ ಚಳುವಳಿ, ಕಾನೂನು ಭಂಗ ಮುಂತಾದ ರೀತಿಯಲ್ಲಿ ಭಾರತದ ಜನತೆ ಪರಕೀಯ ಆಡಳಿತಕ್ಕೆ ವಿರೋಧವನ್ನು ವ್ಯಕ್ತಪಡಿಸಿತು. ೧೮೫೭ರಲ್ಲಿ ನಡೆದ ಈ ಆಂದೋಲನದಲ್ಲಿ ನಾಡಿನ ಬಹು ಸಂಖ್ಯಾತ ಜನ ಭಾಗವಹಿಸಿ ಪರಕೀಯ ಸಂಕೊಲೆಗಳನ್ನು ಕಿತ್ತೊಗೆಯಲು ದೃಢಸಂಕಲ್ಪಮಾಡಿದರು. ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯನ್ನು ವಿರೋಧಿಸಿ ಜನತೆಯು ಈ ಮಹಾ ಸಮರದಲ್ಲಿ ಧುಮುಕಿ ಅಪ್ರತಿಮ ಧೈರ್ಯದಿಂದ ಹೋರಾಡಿತು. ನಾನಾ ಸಾಹೇಬ್, ಕುಂವರ ಸಿಂಹ, ಲಕ್ಷ್ಮೀಬಾಯಿ, ತಾತ್ಯಾಟೋಪಿ, ಬಹದ್ದೂರ್ ಷಾ ಮೊದಲಾದ ಮಹಾ ತ್ಯಾಗಿಗಳು ಈ ಕ್ರಾಂತಿಯ ನಾಯಕತ್ವವನ್ನು ವಹಿಸಿ ಬ್ರಿಟಿಷ್ ಸೈನ್ಯದಳಗಳೊಡನೆ ಧೈರ್ಯ ಶೌರ್ಯ ಪ್ರತಾಪಗಳಿಂದ ಹೋರಾಡಿ ಪ್ರಾಣಾರ್ಪಣೆ ಮಾಡಿದರು. ಈ ಹುತಾತ್ಮರ ತ್ಯಾಗದ ಚಿತ್ರ ಎಲ್ಲ ಕಾಲ್ಲಕ್ಕೂ, ಎಲ್ಲ ಕ್ರಾಂತಿಗಳಿಗೂ ಸ್ಫೂರ್ತಿಯನ್ನು ಕೊಡುವಂತಹುದು.

ಕರ್ನಾಟಕ ಪ್ರದೇಶದಲ್ಲೂ ಅನೇಕ ವೀರರು ಬ್ರಿಟಿಷರ ವಿರುದ್ಧ ಜನತೆಯನ್ನು ಹುರಿದುಂಬಿಸಿ ಅಲ್ಲಲ್ಲೇ ಬಂಡೆಬ್ಬಿಸಿದರು. ಈ ಮಹಾ ವೀರರಲ್ಲಿ ಮುಂಡರಗಿ ಭೀಮರಾಯ ಅಪೂರ್ವ ಕಾಂತಿಯಿಂದ ಶೋಭಿಸುತ್ತಾನೆ.

ಆ ಕಾಲಕ್ಕೆ ನಾಡಿನಾದ್ಯಂತ ಒಂದು ಮಹಾ ಪ್ರಶ್ನೆ ಎದ್ದಿತ್ತು. ಅದು ದತ್ತುಸ್ವೀಕಾರದ ಪ್ರಶ್ನೆ. ೧೮೫೭ರ ಕ್ರಾಂತಿಯಲ್ಲಿ ಭಾಗವಹಿಸಿದ ನಾಯಕರಲ್ಲಿ ಬಹುಮಂದಿ ಈ ದತ್ತುಸ್ವೀಕಾರದ ಪ್ರಶ್ನೆಯ ನಡುವೆ ಸಿಲುಕಿ ನರಳಿದವರು. ದತ್ತು ಸ್ವೀಕಾರ ವಿಷಯದಲ್ಲಿ ಬ್ರಿಟಿಷರ ನೀತಿಯನ್ನು ಒಪ್ಪದಿದ್ದವರು; ಖಂಡಿಸಿದ್ದವರು. ಕರ್ನಾಟಕದಲ್ಲೂ ಅನೇಕ ಸಂಸ್ಥಾನಿಕರು ಈ ಬ್ರಿಟಿಷ್ ಜಾಲಕ್ಕೆ ಸಿಕ್ಕಿ ಸೊರಗಿದ್ದರು. ಆದರೆ ಬಂಡುಗಾರ ಭೀಮರಾಯ ಆ ಗುಂಪಿಗೆ ಸೇರಿದವನಲ್ಲ. ಬ್ರಿಟಿಷರ ಕುಟಿಲ ನೀತಿಯ ರಹಸ್ಯವನ್ನರಿತು, ಅವರ ದುರಾಡಳಿತ ವಿರುದ್ಧ ಕರ್ನಾಟಕ ಜನತೆಯನ್ನು ಎಚ್ಚರಿಸಿ, ಸಾಕಷ್ಟು ಪ್ರಮಾಣದಲ್ಲಿ ಒಂದುಗೂಡಿಸಿ, ಜನತಾ ಕ್ರಾಂತಿಯನ್ನು ಆಗಗೊಳಿಸಲು ಮಹಾ ಪ್ರಯತ್ನಮಾಡಿದವ ಮುಂಡರಗಿ ಭೀಮರಾಯ. "ಸಂಸ್ಥಾನಿಕರಲ್ಲದಿದ್ದರೂ, ಸ್ವಪರಾಕ್ರಮ, ಸ್ವದೇಶಾಭಿಮಾನಗಳಿಂದ ಪ್ರೇರಿತರಾಗಿ ಸ್ವಸಾಮರ್ಥ್ಯದಿಂದ ಬಂಡುಹೂಡಿದ ವೀರರೆಂದರೆ ಮುಂಡರಗಿ ಭೀಮರಾಯರು." 32

> "ಭೀಮರಾಯರು ಯುದ್ಧದ ವಿದ್ಯೆಯಲ್ಲಿ ಒಳ್ಳೆಯ ನಿಪುಣರಿದ್ದರು. ಬೇಟೆಯಾಡುವ ಕಲೆಯಲ್ಲಂತೂ ಅವರ ಕೈಹಿಡಿಯುವವರು

---

32 ೧೮೫೭ ಬಂಡಾಯದ ಇತಿಹಾಸ, ಕೃ. ಗೋ. ಜೋಶಿ, ಪು. ೩೨೪.

ಯಾರೂ ಇರಲಿಲ್ಲ. ಹಾರುವ ಹಕ್ಕಿಗಳನ್ನು ಗುರಿಯಿಟ್ಟು ಹೊಡೆಯುತ್ತಿದ್ದರು. ಹುಲಿ ಹೊಡೆಯುವುದರಲ್ಲಿ ಇವರಿಗೆ ಬಹಳ ಆನಂದ. ಇವರ ಗುರಿಹೊಡೆಯುವ ಕುಶಲತೆಯನ್ನು ನೋಡಲು ಅನೇಕ ಇಂಗ್ಲೀಷ್ ಅಧಿಕಾರಿಗಳು ಇವರೆಡೆಗೆ ಬರುತ್ತಿದ್ದರು. ಇವರ ಹಸ್ತಲಾಘವವನ್ನು ಕಂಡು ಬೆರಗಾಗುತ್ತಿದ್ದರು. ಇವರ ತಂದೆ ಪೇಷ್ವೆಯವರ ನ್ಯಾಯಾಧೀಶರಿದ್ದು, ತಮ್ಮ ಮಗನಿಗೆ ಇಂಗ್ಲೀಷನ್ನು ಚೆನ್ನಾಗಿ ಕಲಿಸಿದ್ದರು. ಇವರು ಬಳ್ಳಾರಿಯಲ್ಲಿ ಮಾಮಲೇದಾರರಾಗಿದ್ದರು. ಸ್ವತಂತ್ರ ವೃತ್ತಿಯ ಈ ಶೂರ ಸರದಾರರಿಗೂ, ಮೇಲಧಿಕಾರಿಗಳಿಗೂ ಕೂಡಿ ನಡೆಯಲಿಲ್ಲ. ಒಂದು ಪ್ರಕರಣದಲ್ಲಿ ಇವರಿಗೆ ಶಿಕ್ಷೆಯಾಗುವ ಪ್ರಸಂಗ ಬಂದಿತು. ಕೂಡಲೇ ಭೀಮರಾಯರು ನೌಕರಿಗೆ ಶರಣು ಹೊಡೆದು, ಬೆಣ್ಣೀಹಳ್ಳಿಯಲ್ಲಿ ಬಂದು ನಿಂತರು."[33]

ಧಾರವಾಡ ಜಿಲ್ಲೆಯ ಮುಂಡರಗಿಯ ನಾಡಗೌಡನಾದ ರಂಗರಾಯನ ಪುತ್ರನೇ ಭೀಮರಾಯ. ವಿದ್ಯಾಭ್ಯಾಸವಾದ ತರುವಾಯ ಭೀಮರಾಯ ಬಳ್ಳಾರಿ ಜಿಲ್ಲೆಯಲ್ಲಿ ಮಾಮಲೇದಾರನಾಗಿ ನೇಮಿಸಲ್ಪಟ್ಟ. ಸ್ವತಂತ್ರ ಮನೋವೃತ್ತಿಯುಳ್ಳ ಭೀಮರಾಯನಿಗೆ ಆಳರಸರ ಗುಲಾಮನಾಗಿ ಬದುಕಬೇಕೆಂಬ ಆಸೆ ಇರಲಿಲ್ಲ. ಜನತಾ ಸೇವೆಗೋಸ್ಕರ ಹಾತೊರೆಯುತ್ತಿದ್ದ ಜೀವ ಆತನದು. ಸ್ವಾತಂತ್ರ್ಯ ಸಾಧನೆಗಾಗಿ ತನ್ನ ಜೀವಮಾನವನ್ನು ಮೀಸಲಾಗಿಟ್ಟಿದ್ದ. ಭೀಮರಾಯನ ಸ್ವತಂತ್ರ ಮನೋಭಾವ, ಕಾರ್ಯತತ್ಪರತೆ, ಆತ್ಮಾಭಿಮಾನ, ಎಲ್ಲರ ಮೆಚ್ಚಿಗೆಗೆ ಪಾತ್ರವಾಗಿತ್ತು. ಆದರೆ ಬ್ರಿಟಿಷ್ ಅಧಿಕಾರಿಗಳಲ್ಲಿ ಭೀಮರಾಯನ ವಿಷಯಕ್ಕೆ ಅಸಹನೀಯತೆ ಮೂಡುತ್ತಿತ್ತು. ಭೀಮರಾಯನ ಧೋರಣೆ ಬ್ರಿಟಿಷರಿಗೆ ಸರಿಬೀಳುತ್ತಿರಲಿಲ್ಲ. ಕೊನೆಗೆ ಆಳರಸರು ಭೀಮರಾಯನ ಮೇಲೆ ಇಲ್ಲದ ಸಲ್ಲದ ಆರೋಪಣೆಗಳನ್ನು ಹೊರಿಸಿ ಹುದ್ದೆಯಿಂದ ತಗೆದು ಹಾಕಿದರು (೧೮೫೪). ಭೀಮರಾಯನು ಬಯಸುತ್ತಿದ್ದ ಕಾಲ ಸಮೀಪಿಸಿತು. ಕೆಲಸದಿಂದ ವಜಾಮಾಡಲ್ಪಟ್ಟ ದಿನವೇ ಅವನು ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಪಣತೊಟ್ಟ. ಬ್ರಿಟಿಷ್ ಆಡಳಿತವನ್ನು ನಿರ್ಮೂಲ ಮಾಡಲೋಸುಗ ಅನೇಕ ಒಳಸಂಚುಗಳನ್ನು ನಡೆಸಿದ. ಸೊರಟೂರು ದೇಸಾಯಿ ಮೂಲಕ ಆ ಪ್ರಾಂತ್ಯದ ಇತರ ನಾಯಕರ ಸ್ನೇಹ ಸಂಪರ್ಕವನ್ನು ಬೆಳಸಿದ. ಸ್ವಲ್ಪಕಾಲದಲ್ಲಿಯೇ ಹಮ್ಮಿಗೆಯ ಕೆಂಚನಗೌಡರು, ಡಂಬಳದ ದೇಶಮುಖರು, ಗೋವಿನಕೊಪ್ಪದ ದೇಸಾಯಿಗಳೂ ಇವನ ಆಪ್ತವರ್ಗಕ್ಕೆ ಸೇರಿದರು. ಬ್ರಿಟಿಷ್ ಆಡಳಿತವನ್ನು ಕೊನೆಗಾಣಿಸುವ ಮಾರ್ಗ ಹೇಗೆ? ಕ್ರಾಂತಿಯನ್ನು ಯಾವ ರೀತಿಯಲ್ಲಿ ವ್ಯವಸ್ಥೆಗೊಳಿಸಬೇಕು?—ಎಂಬೀ ವಿಚಾರಗಳನ್ನು ತನ್ನ ಆಪ್ತಸ್ನೇಹಿತರೊಡನೆ ದೀರ್ಘವಾಗಿ ಆಲೋಚಿಸಿ ಒಂದು ತೀರ್ಮಾನಕ್ಕೆ ಬಂದ.

"ಇದೇ ಸಮಯಕ್ಕೆ ರಾಷ್ಟ್ರದಲ್ಲಿ ಕ್ರಾಂತಿಯ ಗಾಳಿಯು ಬೀಸಿತು. ಭೀಮರಾಯರು ಕ್ರಾಂತಿ ಸಂದೇಶಕ್ಕೆ ಕಿವಿಗೊಟ್ಟು ಕ್ರಾಂತಿಯಲ್ಲಿ

[33] ೧೮೫೭ ಬಂಡಾಯದ ಇತಿಹಾಸ, ಕೃ. ಗೋ. ಜೋಶಿ, ಪು. ೩೨೫.

> ಧುಮುಕಿದರು. ನರಗುಂದದ ಬಾಬಾಸಾಹೇಬನೊಡನೆ ಒಳಸಂಚು ಮಾಡಿ ಬ್ರಿಟಿಷರ ವಿರುದ್ಧ ಬಂಡೆನ್ನೆಬ್ಬಿಸುವ ನಿಶ್ಚಯವನ್ನು ಮಾಡಿದರು". [34]

ಭೀಮರಾಯನ ಮೇಲೆ ಬ್ರಿಟಿಷರ ಕಣ್ಣಿತ್ತು. ಇವನ ಚಲನವಲನಗಳ ಬಗ್ಗೆ ಮೊದಲೇ ಬ್ರಿಟಿಷರಿಗೆ ಸಂಶಯವಿತ್ತು. ಈಗ ಆ ಸಂಶಯ ಇಮ್ಮಡಿಯಾಯಿತು.

ಭೀಮರಾಯ ಜನಪ್ರಿಯ. ತನ್ನ ಅಧಿಕಾರಾವಧಿಯಲ್ಲಿ ಪ್ರಜೆಗಳ ಅಭಿವೃದ್ಧಿಗಾಗಿ ದುಡಿದು, ಅವರ ಅಪಾರ ಪ್ರೇಮ ವಿಶ್ವಾಸಗಳನ್ನು ಸಂಪಾದಿಸಿದ್ದ. ರಾಯಚೂರು ಜಿಲ್ಗೆಯ ಕೊಪ್ಪಳದಲ್ಲಂತು ಇವನ ಪ್ರಭಾವ ಅತಿಶಯವಾಗಿತ್ತು.

ದಿನಾಂಕ ೧-೮-೧೮೫೭ರಲ್ಲಿ ಕರ್ಣಾಟಕ ಪ್ರಾಂತ್ಯದಲ್ಲಿ ಒಂದು ಘಟನೆ ಸಂಭವಿಸಿತು. ಧಾರವಾಡ ಜಿಲ್ಲೆಯ ಕಲೆಕ್ಟರ್‌ರವರಿಗೆ ಭೀಮರಾಯನ ಗುಪ್ತ ಚಟುವಟಿಕೆಗಳ ಬಗ್ಗೆ ಅನೇಕ ಪತ್ರಗಳು ಹೋದವು. ಜಿಲ್ಲಾಧಿಕಾರಿ, ಭೀಮರಾಯನಿಗೆ ಪತ್ರಬರೆದು ತನ್ನನ್ನು ಭೇಟಿಮಾಡಬೇಕೆಂದು ಆಜ್ಞಾಪಿಸಿದ. ಭೀಮರಾಯ ಪಳಗಿದ ಕೈ; ಬುದ್ಧಿವಂತ. ಬ್ರಿಟಿಷರ ಬಲೆಗೆ ಬೀಳುವ ಬಂಡುಗಾರನಲ್ಲ. ಈ ಭೇಟಿಯ ಗುಟ್ಟನ್ನು ಅರಿತು, ಏನೂ ತಿಳಿಯದವನಂತೆ ನಟಿಸಿ, ಭೀಮರಾಯ ಧಾರವಾಡ ಕಲೆಕ್ಟರ್‌ರವರಲ್ಲಿಗೆ ಬಂದು, ತನ್ನ 'ಅಪಾರ ಗೌರವ'ವನ್ನು ಸೂಚಿಸಿ ಹಿಂತಿರುಗಿದ. ಮುಂದಿನ ದಿನಗಳಲ್ಲಿ ಭೀಮರಾಯ ತನ್ನ ಕಾರ್ಯಸ್ಥಾನವನ್ನು ಬದಲಾಯಿಸಿ ಬಂಡಿಗೆ ಬೇಕಾದ ವ್ಯವಸ್ಥೆ ಮಾಡುವುದರಲ್ಲಿ ತೊಡಗಿದ.

ಇತ್ತ ಬ್ರಿಟಿಷ್ ಅಧಿಕಾರಿಗಳು ಕ್ರಾಂತಿಗಾಳಿಯ ವಾಸನೆಯಿಂದಾಗಿ ತಮ್ಮ ಆಡಳಿತ ವ್ಯವಸ್ಥೆಯನ್ನು ಬಿಗಿ ಗೊಳಿಸಿದರು. ಕ್ರಾಂತಿ ನಾಯಕರ ವಿರುದ್ಧ ಮುಂಜಾಗ್ರತೆ ಕ್ರಮಗಳನ್ನು ಜರುಗಿಸಿದರು.

ಭೀಮರಾವ್ ಮುಂಡರಗಿ ರೈತ ಜನಕ್ಕೆ ಕ್ರಾಂತಿ ತತ್ವವನ್ನು ಸಾರಿದ. ಬ್ರಿಟಿಷ್ ಸರ್ಕಾರಕ್ಕೆ ಕಂದಾಯವನ್ನು ಸಲ್ಲಿಸಬೇಡಿರೆಂದು ಬೋಧನೆಮಾಡಿದ. ಆನೆಗುಂದಿ ರಾಜ, ನರಗುಂದದ ಬಾಬಾಸಾಹೇಬ, ಮೊದಲಾದವರಿಗೆ ಪತ್ರಬರೆದು, ತನ್ನ ಹೋರಾಟಕ್ಕೆ ಬೆಂಬಲ ಬೇಡಿದ.

> "ಹಮ್ಮಿಗೆಯು ಮದ್ದಿನ ಮನೆಯಾಯ್ತು. ಶಸ್ತ್ರಾಸ್ತ್ರಗಳು ಕೂಡಿಸಲ್ಪಟ್ಟವು".

ಬ್ರಿಟಿಷರ ದೃಷ್ಟಿ ಭೀಮರಾವ್ ಮುಂಡರಗಿ ಮೇಲೆ ಬಿತ್ತು.

ಹಮ್ಮಿಗೆಯನ್ನು ಕೂಡಲೇ ಶೋಧಿಸಬೇಕೆಂದು ಡಂಬಳ ಅಧಿಕಾರಿಗೆ ಆಜ್ಞೆಯಿತ್ತರು. ಹಮ್ಮಿಗೆಯ ಮದ್ದಿನ ಮನೆ ಬ್ರಿಟಿಷ್ ಅಧಿಕಾರಿಗಳ ವಶವಾಯ್ತು. ಈ ಸುದ್ದಿ ಭೀಮರಾಯನಿಗೆ ತಿಳಿದು, ಅವನು ತನ್ನ ಅನುಯಾಯಿಗಳೊಂದಿಗೆ

---

34 "೧೮೫೭ ಬಂಡಾಯದ ಇತಿಹಾಸ, ಕೃ. ಗೋ. ಜೋಶಿ, ಪು. ೩೨೫.

ಕೆಂಚನಗೌಡರನ್ನು ಕೂಡಿ ಡಂಬಳವನ್ನು ಮುತ್ತಿದ. ಆ ನಗರದ ಸೂರಿಯಾಯಿತು. ಅಲ್ಲಿಂದ ಗದಗಿಗೆ ಬಂದು ಮುಂದೆ ಕೊಪ್ಪಳದುರ್ಗವನ್ನು ಸಮೀಪಿಸಿದ. ಕ್ರಾಂತಿಕಾರರ ಸೈನ್ಯ ಕುಮಾರ ರಾಮನ ಕುಮಟ ಎಂಬಲ್ಲಿ ಬೀಡು ಬಿಟ್ಟಿತು. ಸ್ವಲ್ಪಕಾಲದಲ್ಲೇ ಭೀಮರಾವ್ ಮುಂಡರಗಿ ಮತ್ತು ಕೆಂಚನಗೌಡರು ನಿರಾಯಾಸವಾಗಿ ಕೊಪ್ಪಳದುರ್ಗವನ್ನು ತಮ್ಮ ವಶಪಡಿಸಿಕೊಂಡರು. ಕೊಪ್ಪಳದ ಜನತೆ ಈ ಕ್ರಾಂತಿವೀರರಿಗೆ ಉತ್ಸಾಹಪೂರಿತ ಸ್ವಾಗತ ನೀಡಿತು. ಕ್ರಾಂತಿ ಕೋಟೆಯಾಯಿತು ಕೊಪ್ಪಳ. ಕೊಪ್ಪಳ ಕೋಟೆ ಬಹಳ ಪ್ರಸಿದ್ಧವಾದುದು; ಅಜೇಯವೆನಿಸಿದ ಕೋಟೆ. ಇಂದಿಗೂ ಹಿಂದಿನ ವೈಭವದ ನೆನಪು ತರುವ ಮಹಾನಗರ. ಕೊಪ್ಪಳವೆಂದರೆ ಇಂದಿಗೂ ಜನರಿಗೆ ರೋಮಾಂಚನ ಉಂಟಾಗುವುದು. ಜನತೆಯ ಸ್ಮೃತಿ ಪಥದಿಂದ ಭೀಮರಾವ್ ಮುಂಡರಗಿ ಇಂದಿಗೂ ದೂರವಾಗಿಲ್ಲ. ಆತನ ದಿಟ್ಟತನ ಇಂದಿಗೂ ಅಚ್ಚಳಿಯದಂತಿದೆ. ಲಾವಣಿಕಾರರು ಆತನ ಧೈರ್ಯಸಾಹಸಗಳನ್ನು ಇಂದಿಗೂ ಕೊಂಡಾಡುತ್ತಾರೆ. ನೂರು ವರ್ಷಗಳ ಹಿಂದೆ ಕರ್ಣಾಟಕದಲ್ಲಿ ಬ್ರಿಟಿಷ್ ವಿರುದ್ಧ ಜನತೆಯನ್ನು ಸಂಘಟಿಸಿ, ಜನತೆಯನ್ನು ಎತ್ತಿಕಟ್ಟಿ, ಕ್ರಾಂತಿಯನ್ನೆಬ್ಬಿಸಿ, ಬಹು ಪರಾಕ್ರಮದಿಂದ ಹೋರಾಡಿ, ಯುದ್ಧಭೂಮಿಯಲ್ಲೇ ವೀರಸ್ವರ್ಗವನ್ನೇರಿದ ಮಹಾವೀರ, ಭೀಮರಾವ್.

ಕೊಪ್ಪಳ ಕ್ರಾಂತಿಕಾರರ ಕೈವಶವಾದ ಸುದ್ದಿ ಬ್ರಿಟಿಷರಿಗೆ ಮುಟ್ಟಿತು. ಧಾರವಾಡ, ಬಳ್ಳಾರಿ, ರಾಯಚೂರು ಕಡೆಗಳಿಂದ ಬ್ರಿಟಿಷ್ ಸೈನ್ಯದಳಗಳು ಕೊಪ್ಪಳದತ್ತ ಧಾವಿಸಿದುವು. ಮೇಜರ್ ಹ್ಯೂಜನು ದಿನಾಂಕ ೩೧-೫-೧೮೫೮ರಲ್ಲಿ ಬಳ್ಳಾರಿಯಿಂದ ಕೊಪ್ಪಳಕ್ಕೆ ಹೊರಟನು. ಬ್ರಿಟಿಷ್ ಸೈನ್ಯ ಕೊಪ್ಪಳ ಕೋಟೆಯನ್ನು ಸುತ್ತುವರಿಯಿತು. ದಿನಾಂಕ ೧-೬-೧೮೫೮ರಂದು ಪಿಂಡಾರನ ನಾಯಕತ್ವದಲ್ಲಿ ಹೈದರಾಬಾದ್ ದಳ ಬಂದಿತು. ಈ ದಳದೊಂದಿಗೆ ಟೇಲರ್ ಸಾಹೇಬನು ಬಂದನು. ಮೇಜರ್ ಹ್ಯೂಜನು ಭೀಮರಾಯನಿಗೆ ಪತ್ರ ಬರೆದು 'ಮೂರು ಘಂಟೆಗಳಲ್ಲಿ ಶರಣು' ಹೋಗಬೇಕೆಂದು ತಿಳಿಸಿದನು. ಮುಂಡರಗಿ ಭೀಮರಾಯನು ಈ ಬೆದರಿಕೆಯ ಪತ್ರಕ್ಕೆ ಸೊಪ್ಪು ಹಾಕಲಿಲ್ಲ. ಬ್ರಿಟಿಷರ ಶಕ್ತಿಗೆ ಹೆದರಲಿಲ್ಲ. ಅಂತಿಮ ಹೋರಾಟಕ್ಕೆ ಅಣಿ ಮಾಡಿಕೊಂಡರು. ಅಂದೇ ಎರಡು ಸೈನ್ಯಗಳಿಗೂ ಘೋರ ಯುದ್ಧ ಪ್ರಾರಂಭವಾಯ್ತು.

ಅಜೇಯವೆನಿಸಿದ್ದ ಕೊಪ್ಪಳ ಕೋಟೆ ಒಡೆದು ಚೂರಾಯಿತು. ಬ್ರಿಟಿಷ್ ಸೈನ್ಯ ದಳಗಳು ನಗರವನ್ನು ಪ್ರವೇಶಿಸಿದುವು. ಕ್ರಾಂತಿಕಾರರ ಶೌರ್ಯ ಸಾರ್ಥಕವಾಗಲಿಲ್ಲ. ಭೀಮರಾವ್ ಮುಂಡರಗಿ, ಕೆಂಚನಗೌಡರು ವೀರಾವೇಶದಿಂದ ಹೋರಾಡಿ ಯುದ್ಧ ಭೂಮಿಯಲ್ಲೇ ಮಡಿದರು. ಕ್ರಾಂತಿಕಾರರ ಚೈತನ್ಯ ಹಾರಿಹೋಯ್ತು. ಬ್ರಿಟಿಷರು ವಿಜಯ ಪತಾಕೆಯನ್ನೆತ್ತಿದರು. ಭೀಮರಾಯನ ದೇಹ ಬ್ರಿಟಿಷರ ಕೈವಶವಾಯ್ತು. (ಇವನ ತಲೆಯ ಮೇಲೆ ಐದು ಸಾವಿರ ಬಹುಮಾನವಿತ್ತಂತೆ) ನೂರೈವತ್ತಕ್ಕೂ ಹೆಚ್ಚು ಮಂದಿ ಕ್ರಾಂತಿಕಾರರು ಸೆರೆ ಹಿಡಿಯಲ್ಪಟ್ಟರು. ಎಪ್ಪತ್ತೈದು ಕ್ರಾಂತಿಕಾರರನ್ನು ಗಲ್ಲಿಗೇರಿಸಿದರು. ಭೀಮರಾಯನ ಕುಟುಂಬ ಜೀವೂಬಾಯಿ, ವೆಂಕೂಬಾಯಿ, ಬೆಣ್ಣೆಹಳ್ಳಿಯನ್ನು

ಸೇರಿದರು.[35] ಭೀಮರಾಯರ ಗುಮಾಸ್ತೆ ಭೀಮಪ್ಪನೆಂಬವ, ಸ್ವಾಮಿದ್ರೋಹಿ ಯಾಗಿ ಬ್ರಿಟಿಷರಿಗೆ ತನ್ನ ಸ್ವಾಮಿಯ ಗುಪ್ತಕಾರ್ಯ ಕಾರ್ಯಕ್ರಮವನ್ನೆಲ್ಲ ತಿಳಿಸಿದ. ರಾಯಚೂರು ದೋಅಬದ ಜಿಲ್ಲಾಧಿಕಾರಿಗೆ ಇವನು ದಿನಾಂಕ ೪-೬-೧೮೫೮ರಲ್ಲಿ ಈ ಬಗೆಯಾಗಿ ಹೇಳಿಕೆಯೊಂದನ್ನು ಕೊಟ್ಟಿದ್ದಾನೆ.[36] ಕನ್ನಡದ ಮೂಲವನ್ನು ಇಂಗ್ಲಿಷಿಗೆ ಭಾಷಾಂತರ ಮಾಡಲಾಗಿದೆ. ಇಂಗ್ಲಿಷ್ ಅನುವಾದ ದಿಂದ ಈಗ ಕನ್ನಡಕ್ಕೆ ಭಾಷಾಂತರ ಮಾಡಲಾಗಿದೆ. ಕನ್ನಡದ ಮೂಲ ಸಿಗುವ ಹಾಗಿಲ್ಲ.

"ಗತಿಸಿದ ಬಂಡುಗಾರ ಮುಂಡರಗಿ ಭೀಮರಾಯನಿಗೆ ನಾನು ಗುಮಾಸ್ತೆ ಯಾಗಿದ್ದೆ. ಈ ಬಂಡಾಯಕ್ಕೆ ಸಂಬಂಧಪಟ್ಟಂತೆ ಏನೇನು ಪೂರ್ವ ಸಿದ್ಧತೆ ಗಳಾದುವು ಮೊದಲಾದುವುಗಳನ್ನು ಕುರಿತು ನನಗೆ ಗೊತ್ತಿರುವುದನ್ನೆಲ್ಲ ಇಲ್ಲಿ ಬಯಲಿಗಿಡುತ್ತೇನೆ:

(೧) ಮೂರು ತಿಂಗಳ ಹಿಂದೆ, ನರಗುಂದದ ರಾಜ, ಮೊದಲನೆಯ ಸಾರೆ, ಪ್ರಭುತ್ವ ವಿರುದ್ಧ ಬಂಡಾಯನನ್ನೆಬ್ಬಿಸುವ ಸಲಹೆಯನ್ನು ಮುಂದಿಟ್ಟ. ಈ ಕಾರ್ಯಸಾಧನೆಗಾಗಿ ಮೊದಲು ಡಂಬಳದ ದೇಸಾಯಿಯೊಂದಿಗೂ, ಅನಂತರ ಹಮ್ಮಿಗಿ ದೇಸಾಯಿಯೊಂದಿಗೂ ವಿಚಾರ ಮಾಡಿದ. ಅನಂತರ ಮುಂಡರಗಿ ಭೀಮರಾಯನ ಬುದ್ಧಿವಾದವನ್ನೂ ಪಡೆದ. "ನಾವೇನು ತಾನೆ ಮಾಡಲು ಸಮರ್ಥರು" ಅಂದ ಭೀಮರಾಯ. ಕೂಡಲೆ ನರಗುಂದದರಸ "ತೊರಗಲ್ ಜನರೂ, ಇತರ ಕಡೆಗಳವರೂ ಸೇರುತ್ತಾರೆ. ಇವರೆಲ್ಲ ಸೇರಿ ಪ್ರಬಲ ಸೈನ್ಯವನ್ನು ಕೂಡಿಸುತ್ತಾರೆ" ಎಂಬದಾಗಿ ಉತ್ತರವಿತ್ತ. ಡಂಬಳ ದೇಸಾಯಿಯು ತನ್ನ ಇಲಾಖೆಯಲ್ಲಿ ಯೋಧರನ್ನು ಸೇರಿಸುತ್ತ ಬಂದ. ಮುಂಡರಗಿ ಭೀಮರಾಯ ಹೊಸಪೇಟೆ, ಕಾಮಲಾಪುರ, ಮೊದಲಾದ ಕಡೆಗಳಲ್ಲಿ ಜನಬಲ ಸಂಗ್ರಹ ಕಾರ್ಯವನ್ನಾರಂಭಿಸಿದ. ಸೈನ್ಯಬಲ ಬೆಳಸುವ ಈ ಕಾರ್ಯ ನಡೆಯುತ್ತಿರಲಾಗಿ ಭೀಮರಾಯನಿಗೊಂದಾಲೋಚನೆ ಹೊಳೆಯಿತು. ಕೊಪ್ಪಳದ ಜಮ್ಮವನ್ನಾ ಕ್ರಮಿಸಬೇಕೆಂದು ಹಂಚಿಕೆ ಹಾಕಿದ. ಎರಡು ತಿಂಗಳ ಹಿಂದೆಯೇ ಬರ್ಮ ನಾಯಕ ಸವಾರನ ಮಗನಿಗೆ ಹೇಳಿಕಳುಹಿಸಿದ. ಮೋಸಗಾರಿಕೆಯಿಂದ ಕೊಪ್ಪಳ ವನ್ನು ವಶಪಡಿಸಿಕೊಳ್ಳುವ ಸಕಲ ಸಿದ್ಧತೆಗಳನ್ನೂ ಅವನೊಂದಿಗೆ ಮಾಡಿದ. ಈ ಕೆಲಸ ಮಾಡಿದಾಗ ನಾನು ಪ್ರತ್ಯಕ್ಷವಾಗಿರಲಿಲ್ಲ. ಹೀಗೆಲ್ಲ ಆಯಿತೆಂದು ಆ ಮೇಲೆ ಭೀಮರಾಯರೇ ನನಗೆ ಹೇಳಿದರು.

---

[35] ಭೀಮರಾಯನ ಆಸ್ತಿಪಾಸ್ತಿಗಳನ್ನೆಲ್ಲ ಬ್ರಿಟಿಷ್ ಅಧಿಕಾರಿಗಳು ವಶಪಡಿಸಿಕೊಂಡರು. ಆತನ ಆಸ್ತಿಯ ಕೊಂಚಭಾಗವು ನಗರ ಡಿವಿಜನಲ್ಲಿತ್ತೆಂದೂ, ಅದನ್ನು 'ಸೂಪರಿಂ ಟೆಂಡೆಂಟ್' ಮೇಜರ್ ಪೋರ್ಟರವರು ಮಾರಿ ರೂ. ೪,೧೧೧-೧೪-೬ಗಳನ್ನು ಪಡೆದರೆಂದೂ, ಆ ಹಣವನ್ನು ರಾಣಿಬಿದನೂರು ಖಜಾನೆಗೆ ಕಳುಹಿಸುವ ಏರ್ಪಾಟು ಮಾಡಿದರೆಂದೂ ತಿಳಿದುಬರುತ್ತದೆ. ಇದಕ್ಕೆ ಸಂಬಂಧಪಟ್ಟ ಪತ್ರವೊಂದು (Appendix V) ಧಾರವಾಡದ ಕಲೆಕ್ಟರ್ ಕಚೇರಿಯ ಮುಂಡರಗಿ ಭೀಮರಾಯರ ಪ್ರಕರಣದ ಪತ್ರಗಳ ಕಡತದಲ್ಲಿದೆ.

[36] ಮುಂಡರಗಿ ಭೀಮರಾಯರ ಪ್ರಕರಣಕ್ಕೆ ಸಂಬಂಧಪಟ್ಟ ಪತ್ರಗಳ ಕಡತವೊಂದು ಧಾರವಾಡದ 'ಕಲೆಕ್ಟರ' ಕಚೇರಿಯಲ್ಲಿದೆ. ಆ ಕಡತದಿಂದ ಎತ್ತಿ ಕೊಟ್ಟಿರುವ ಪತ್ರವಿದು. (*See* Appendix I).

(೨) ನಿಮ್ಮಲ್ಲಿರುವ ಶಸ್ತ್ರಾಸ್ತ್ರಗಳು, ಮದ್ದುಗುಂಡು, ಸಕಲ ಸಂಗ್ರಾಮ ಸಾಮಗ್ರಿಗಳನ್ನು ತಮಗೊಪ್ಪಿಸತಕ್ಕದ್ದೆಂದು ಆಳರಸರು ಆಜ್ಞೆ ಮಾಡಿದರು. ನರಗುಂದ ದೇಸಾಯಿಗಳು ಬಂಡೆಬ್ಬಿಸಲಿಕ್ಕಿದೇ ಕಾರಣ.

ನರಗುಂದ ದೇಸಾಯಿಗಳು ತಮ್ಮ ಸವಾರ ಬಸಪ್ಪನೆಂಬವನನ್ನು ಭೀಮರಾಯರ ಬಳಿ ಕಳುಹಿಸಿದರು. ಕಂಪೆನಿ ಸರಕಾರದವರು ಸಂಸ್ಥಾನದ ಮದ್ದುಗುಂಡನ್ನೆಲ್ಲ, ದೇಸಾಯಿಗಳ ಹಿರಿಯರು ಆರ್ಜಿಸಿದ್ದನ್ನೆಲ್ಲ, ತಮಗೊಪ್ಪಿಸಬೇಕೆಂದು ಆಜ್ಞೆ ಮಾಡುತ್ತಿದ್ದಾರೆ. ಇದನ್ನೆಲ್ಲ ನಾವು ಕೊಟ್ಟುಬಿಟ್ಟರೆ ನಮಗೆ ಉಳಿಯುವುದೇನು? ಆದ್ದರಿಂದ ಹೊಡೆದಾಡುವುದು ಖಂಡಿತ—ಇದನ್ನೆಲ್ಲ ನಾನು ಬೆಣ್ಣೆಹಳ್ಳಿಯಲ್ಲಿ ಕೇಳಿದೆ.

(೩) ಹಮ್ಮಿಗಿ ದೇಸಾಯಿ ಕೆಂಚನಗೌಡ, ಮುಂಡರಗಿ ಭೀಮರಾವ್ ಇವರಿಬ್ಬರೂ ನರಗುಂದದ ಬಾಬಾ ಸಾಹೇಬರ ಸಹಾಯಕ್ಕೆ ಹೋಗಲು ನಿಶ್ಚಯಿಸಿದ್ದಕ್ಕೆ ಕಾರಣವಿದೆ—ಕಂಪೆನಿ ಸರಕಾರದವರು ನಮ್ಮ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಳ್ಳುತ್ತಾರೆ, ನಮ್ಮನ್ನು ಬಂಧನದಲ್ಲಿಡುತ್ತಾರೆ.

(೪) ನರಗುಂದದ ಬಾಬಾ ಸಾಹೇಬರದೇ ಈ ಬಂಡಾಯ ಪ್ರಕರಣದಲ್ಲಿ ಮುಖ್ಯಪಾತ್ರ. ಈ ಬಂಡಾಯದ ಸೂತ್ರಧಾರಿಗಳಿವರೆ. ತೊರಗಲ್ ರಾಜ ವೆಂಕಪ್ಪಯ್ಯ, ಡಂಬಳ ದೇಸಾಯಿ, ಹಮ್ಮಿಗಿ ದೇಸಾಯಿ, ಮುಂಡರಗಿ ಭೀಮರಾವ್, ಇವರೆಲ್ಲ ಬಂಡಾಯದಲ್ಲಿ ಭಾಗವಹಿಸಿದವರು. ಇದರೊಂದಿಗೆ ಇನ್ನೂ ಯಾರ ಯಾರ ಸಂಬಂಧವಿತ್ತೊ ನನಗೆ ಗೊತ್ತಿಲ್ಲ. ಆದರೆ ನಾನಾ ಸಾಹೇಬ, ನರಗುಂದದ ಬಾಬಾ ಸಾಹೇಬ ಇವರಿಬ್ಬರ ಮಧ್ಯೆ ಪತ್ರವ್ಯವಹಾರವಾಗುತ್ತಿತ್ತೆಂದು ನಾ ಕೇಳಿದ್ದೆ.

(೫) ಬಂಡಾಯವು ಏಕಕಾಲದಲ್ಲಿ ಮೇಲಿನ ಎಲ್ಲ ಪ್ರಭುಗಳಿಂದಲೂ ಆರಂಭವಾಗತಕ್ಕದ್ದೆಂಬುದೂ, ಯಾವ ಯಾವ ಕ್ಷೇತ್ರದಲ್ಲಿ ಯಾರು ಯಾರು, ಯಾವ ಯಾವ ಸ್ಥಾನಗಳಲ್ಲಿರಬೇಕೆಂಬುದೂ, ನಿಶ್ಚಯವಾಗಿತ್ತು. ಕಾಲ ೨೭-೫-೧೮೫೮ನೇ ದಿನಾಂಕವೆಂದು ನಿರ್ಧರವಾಗಿತ್ತು.

ನರಗುಂದದ ಬಾಬಾ ಸಾಹೇಬರು ನವಲ್ಗುಂದ, ಧಾರವಾಡಗಳ ಕಡೆ ಹೊರಡತಕ್ಕದ್ದು. ದೊಡ್ಡ ದೊಡ್ಡ ಪಟ್ಟಣಗಳನ್ನೆಲ್ಲ ಲೂಟಿ ಮಾಡತಕ್ಕದ್ದು. ನವಲ್ಗುಂದ ಕೋಟೆಯನ್ನಾಕ್ರಮಿಸತಕ್ಕದ್ದು. ಡಂಬಳ ದೇಸಾಯಿಗಳು ಡಂಬಳ, ಗದಗಗಳನ್ನು ಲೂಟಿಮಾಡತಕ್ಕದ್ದು.

ತೊರಗಲ್ ರಾಜ ತನ್ನ ಕಡೆ ಆದಷ್ಟು ಗಲಾಟೆಗಳನ್ನುಂಟುಮಾಡತಕ್ಕದ್ದು. ಭೀಮರಾವ್ ಮತ್ತು ಕೆಂಚನಗೌಡ ಇಬ್ಬರೂ ಕೊಪ್ಪಳದ ಕಡೆ ಸಾಗಿ, ಕೋಟೆಗೆ ಲಗ್ಗೆ ಹಾಕಿ, ಆಕ್ರಮಿಸತಕ್ಕದ್ದು. ರಾಮದುರ್ಗ, ನರಗುಂದ ರಾಜರಿಬ್ಬರೂ ಸಹೋದರರಾಗಿ, ಅವರಿಬ್ಬರೂ ಒಂದಾಗಿರಬಹುದು. ಆ ವಿಚಾರ ನನ್ನ ಕಿವಿಗೇನೂ ಬೀಳಲಿಲ್ಲ. ಕಾರಣ ಈ ಮಧ್ಯೆ ಧಾರವಾಡ ಮ್ಯಾಜಿಸ್ಟ್ರೇಟರಿಂದಾಜ್ಞಪ್ತನಾಗಿ ಗದಗಿನ ಜಾಯಿಂಟ ಪೋಲೀಸ್ ವೆಂಕಟರಾಯ, ಹಮ್ಮಿಗಿ ದೇಸಾಯಿ ಕೆಂಚನಗೌಡನ ವಶದಲ್ಲಿದ್ದ ಶಸ್ತ್ರಾಸ್ತ್ರಗಳನ್ನೆಲ್ಲ ವಶಪಡಿಸಿಕೊಳ್ಳಲು ಬಂದ. ಬಂಡಾಯ ೨೭ನೇ ತಾರೀಖಿನ ಅನಂತರ ಆರಂಭವಾಗಬೇಕಾಗಿತ್ತು.

೨೪ನೇ ತಾರೀಖಿನ ದಿನವೇ ಅಕಾಲದಲ್ಲಿ ಬಂಡಾಯವಾರಂಭವಾಯಿತು. ಹಮ್ಮಿಗಿ ಬಳಿ ಸುತ್ತಮುತ್ತಣ ಹಳ್ಳಿಗಳ ೨೦೦-೩೦೦ ಮಂದಿ ಸೇರಿದರು. ಎಲ್ಲರೂ ಡಂಬಳ ದೇಸಾಯಿಗಳ ಭೇಟಿಗೆ ಹೊರಟರು. ಆದರೆ ದೇಸಾಯಿ ಅಲ್ಲಿರಲಿಲ್ಲ. ಸೇರಿದ ಗುಂಪೆಲ್ಲ ಅಲ್ಲಿಂದ ಹೊರಟಿತು. ದಿನಾಂಕ ೨೫-೫-೧೮೫೮ನೇ ರಾತ್ರಿ ಕವಲೂರು ಪಕ್ಕದ ಹಳ್ಳದಲ್ಲಿ ಬೀಡುಬಿಟ್ಟಿತು. ಜನರಿಗೆಲ್ಲ ಆ ದಿನ ಹಳ್ಳಿಯವರೇ ಸರಬರಾಯಿ ಮಾಡಿದರು. ಕವಲೂರು ಗೌಡ ಪಟೇಲರು ಭೀಮರಾಯನನ್ನು ಕಂಡರು. ಆದರೆ ಭೀಮರಾಯ ಇದಕ್ಕೆ ಮೊದಲಾಗಲಿ, ಅನಂತರವಾಗಲಿ, ಅವರೊಂದಿಗೆ ವಿಚಾರ ಮಾಡಿದಹಾಗಿಲ್ಲ. ೨೬-೫-೧೮೫೮ನೇ ದಿನಾಂಕ ನಾವು ಕೊಪ್ಪಳ ತಾಲ್ಲೂಕಿನ......ಕ್ಕೆ ಹೊರಟೆವು. ಅಲ್ಲಿ ಕೆಂಚಪ್ಪ ಮುದ್ದಿ ಶಿವಪುರ, ಭೀಮರಾಯನ ಭೇಟಿ ಮಾಡಿ, ಹಲವು ಜನರನ್ನು ಸೇರಿಸಿಕೊಡುತ್ತೇನೆಂದು ಭೀಮರಾಯನಿಗೆ ಭರವಸೆ ಕೊಟ್ಟ. ಈ ವಿಚಾರ ಭೀಮರಾಯ ನನಗೆ ಹೇಳಿದ. ನಾಗಸನಹಳ್ಳಿ ಮತ್ತು ನೆರೆಹೊರೆ ಹಳ್ಳಿಗಳು ಯಾವುವೂ ಬಂಡಾಯದಲ್ಲಿ ನೆರವಾಗಲಿಲ್ಲ. ಅನಂತರ ಭೀಮರಾಯ ಬೂದಪ್ಪನಹಳ್ಳಿಯವನೊಬ್ಬನನ್ನು ಕೊಪ್ಪಳದ ಬರ್ಮ ನಾಯಕ ಸವಾರನ ಬಳಿಗೆ ಕಳುಹಿಸಿದ. ಬರ್ಮ ನಾಯಕ ಅವನ ಮೂಲಕವಾಗಿಯೇ ಒಂದು ಸಂದೇಶ ಕಳಿಸಿದ. ಕೊಪ್ಪಳವನ್ನು ಬಿಟ್ಟುಕೊಡುವ ಹಾಗೆ ಜನರಲ್ಲೆಲ್ಲ ಸಂಚು ನಡೆಸಿ, ಅವರನ್ನೂ ದ್ರೋಹಕ್ಕೆ ಸಿದ್ಧಗೊಳಿಸಲಾಗಿದೆಯೆಂಬುದೇ ಆ ಸಂದೇಶ. ಸರಿ, ಭೀಮರಾಯ, ಕೆಂಚನಗೌಡ, ಇಬ್ಬರೂ ಕೊಪ್ಪಳ ಮುಟ್ಟಿದರು. ಕೊಪ್ಪಳವೆಲ್ಲ ಅವರ ವಶವಾಯಿತು.

"ಕೆಂಚನಗೌಡ, ನಾನೂ, ಇಬ್ಬರೂ ಕೊಪ್ಪಳದ ಮೋದೀನ್ ನಾಯಕರ ಮನೆಗೆ ಹೋದೆವು. ಅವರು ಸರಕಾರವನ್ನೆದುರಿಸುವ ಕಾರ್ಯದಲ್ಲಿ ನಮಗೆ ಸಹಾಯಮಾಡುವುದಾಗಿ ಭರವಸೆ ನೀಡಿದ್ದಾರೆ" ಎಂಬದಾಗಿ ಭೀಮರಾಯರೇ ಹೇಳಿದ್ದನ್ನು ನಾನು ಕೇಳಿದೆ. ದೀರ್ಘಕಾಲದಿಂದ ರಾಜನಾಯಕ, ಮುಕ್ತುಂ ಮೋರ್ದಿ ನಾಯಕ ಈ ಬಂಡಾಯದಲ್ಲಿ ಸೇರಿದವರಾಗಿದ್ದಾರೆ. ಎರಡು ತಿಂಗಳ ಹಿಂದೆ ಭೀಮರಾಯ ಶಿವಪುರದ ಕೆಂಚಪ್ಪಮುದ್ದಿ, ವೆಂಕಣ್ಣ, ಇವರನ್ನು ಕರೆಸಿ, ಶಿವಪುರ ಮತ್ತು ಇತರ ಗ್ರಾಮಗಳಿಂದ ಜನರನ್ನು ಕರೆತರುವ ವ್ಯವಸ್ಥೆಮಾಡಬೇಕೆಂದು ಆಜ್ಞೆಮಾಡಿ, ಅವರನ್ನು ಹಿಂದಕ್ಕೆ ಕಳುಹಿಸಿದ. ಕೆಲವು ದಿನಗಳ ಅನಂತರ ಅವರು ಹಿಂತಿರುಗಿದರು. ಸಶಸ್ತ್ರ ಜನರನ್ನು ಕೂಡಿಸುವ ವ್ಯವಸ್ಥೆಯಾಗಿದೆಯೆಂದು ತಿಳಿಸಿದರು. ಅಲ್ಲದೆ ಆನೆಗುಂದಿ ರಾಜನು ಸಹ ಈ ಬಂಡಾಯವನ್ನು ಸೇರುವ ಹಾಗಿದ್ದಾನೆಂದು ತಿಳಿಸಿದರು. ಇದನ್ನು ಕೇಳಿದ ಕೂಡಲೇ ಭೀಮರಾಯ ತನ್ನ ಕಾರಕೂನ ನರಹರಿಯನ್ನು ಆನೆಗುಂದಿಗೆ ಕಳುಹಿಸಿದ. ಆನೆಗುಂದಿ ರಾಜನಾದರೋ ತನ್ನ ಜಮೆದಾರನೊಬ್ಬನನ್ನು ಬೆಣ್ಣೆಹಳ್ಳಿಗೆ ಕಳುಹಿಸಿದ. ಭೀಮರಾಯ, ಜಮೇದಾರ, ಕೂಡಿ ಏನೇನೋ ಆಲೋಚನೆಗಳನ್ನು ಮಾಡುತ್ತಿದ್ದರು. ಅವರ ಸಂಭಾಷಣೆ ಕೇಳಲು ನಾನು ಅಲ್ಲಿರಲಿಲ್ಲ. ಆದರೆ ಭೀಮರಾಯರ ಬಾಯಿಂದಲೇ ಅವರು ಏನೇನು ಕಾರ್ಯಕಲಾಪಗಳನ್ನು ಸಿದ್ಧಗೊಳಿಸಿಕೊಂಡಿದ್ದರೆಂಬುದನ್ನು ಕೇಳಿದೆ. ನರಹರಿಯನ್ನು ಕುಮಾರ ರಾಮನ ಕುಮಟದಿಂದ ಆನೆಗುಂದಿಗೆ ಕಳುಹಿಸಲಾಯಿತೆಂದೂ, ಆನೆಗುಂದಿ ರಾಜನಿಂದ ಕಳುಹಿ

ಸಲ್ಪಟ್ಟ ಜಮೇದಾರ ಬಂದನೆಂದೂ ಗೊತ್ತಾಯಿತು. ಅವನ ಕಡೆಯ ಜನರಿನ್ನೂ ಬರಲಿಲ್ಲವೆಂದು ಭೀಮರಾಯ ಹೇಳಿದ. ಕೊಪ್ಪಳವನ್ನು ವಶಪಡಿಸಿಕೊಂಡಿದ್ದರೆ ಅವರು ನನ್ನನ್ನು ಬಂದು ಸೇರುತ್ತಿದ್ದರೆಂದು ಹೇಳಿದ. ಗಂಗಾವತಿ ಕಡೆಯ ಮುಸಲ್ಮಾನರೊಂದಿಗೆ ಭೀಮರಾಯ ಮಾತನಾಡಿದ. ಮುಸಲ್ಮಾನ, ಭೀಮರಾಯ ಗಂಗಾವತಿ ಕಡೆ ಹೊರಡಬೇಕೆಂದು ಸೂಚನೆ ಮಾಡಿದ. ತಾನು (ಜಮೇದಾರ) ತನ್ನವರೊಂದಿಗೆ ಅತ್ತಲಾಗಿ ಬರುವುದಾಗಿಯೂ, ಭಂಡಾರ ಲೂಟಿಮಾಡಿ ಕೊಪ್ಪಳದ ಕಡೆಗೆ ಸಾಗುವ ಹಾಗೂ, ಅಲ್ಲಿನ ಠಾಣಾ ಆಕ್ರಮಿಸುವ ಹಾಗೂ ಹೇಳಿ, ಜಮೇದಾರ ಹೊರಟ. ಭೀಮರಾಯ ಗಂಗಾವತಿಗೆ ಹೊರಡುವುದಾಗಿ ಒಪ್ಪಿದ. ಆದರೆ ಅವನ ಸಂಸಾರ ಕೊಪ್ಪಳದಲ್ಲಿತ್ತು. ಅಲ್ಲಿಂದ ಸಂದೇಶವೊಂದು ಬಂತು. ಅದರಿಂದ ಅವನು ಮನಸ್ಸನ್ನು ತಿರುಗಿಸಿ, ಗಂಗಾವತಿಗೆ ಬದಲಾಗಿ ತಕ್ಷಣ ಕೊಪ್ಪಳಕ್ಕೆ ಹೊರಟ.

(೬) ಮೂರು ತಿಂಗಳ ಹಿಂದೆ ನರಗುಂದ ರಾಜನ ಕಡೆಯಿಂದ ಸವಾರ ಬಸಪ್ಪ ಬಂದನಪ್ಪೆ. ಅವನು ಧಾರವಾಡದ ರಿಸಾಲಾ ಜಮೇದಾರನನ್ನೂ, ಬೆಳಗಾಂ, ಕಲಾದ್ಗಿ ಸವಾರನನ್ನೂ, ನರಗುಂದದರಸರು ಒಳಹಾಕಿಕೊಂಡಿದ್ದಾರೆಂದು ತಿಳಿಸಿದ.

(೭) ಬಂಡಾಯದ ಇತ್ತ ಕಡೆಗೆ ಭೀಮರಾಯ ಬಂದ ಕೂಡಲೇ ನರಗುಂದದ ರಾಜನ ಬಳಿಗೂ, ಡಂಬಳದ ದೇಸಾಯಿಯ ಬಳಿಗೂ, ಒಬ್ಬ ಸವಾರನನ್ನಟ್ಟಿ 'ಗಲಾಟೆಗಳನ್ನಾರಂಭಿಸಿ'ರೆಂದು ಸಲಹೆಮಾಡಿದ. ಹೊಸಪೇಟೆ, ಕಾಮಲಾಪುರ ಮತ್ತು ಇತರ ಗ್ರಾಮಗಳೂ ಬಂಡಾಯ ಸೇರಬೇಕೆಂಬ ಉದ್ದೇಶದಿಂದ ಭೀಮರಾಯ ಹೊಸಪೇಟೆಯಲ್ಲಿದ್ದ ಠಾಕೂರನಿಗೆ ಹೇಳಿಕಳುಹಿಸಿದ; ಅವನಿಗೆ ೫೦೦ ರೂಪಾಯಿಗಳನ್ನೂ ಕೊಟ್ಟ.

ಮೇಲಿನ ಎಂಟು ಪ್ಯಾರಾಗಳ ಒಂದು ಭಾಗವನ್ನು ನನ್ನ ಸ್ವಹಸ್ತದಿಂದ ಬರೆದಿದ್ದೇನೆ. ಉಳಿದ ಭಾಗವನ್ನು ನಾನೇ ಹೇಳಿ ಬರೆಸಿದ್ದೇನೆ.

(ಸಹಿ) ಭೀಮರಾವ್,
ಗುಮಾಸ್ತಾ, ಬಂದಿ.

ನಿಜವಾದ ಭಾಷಾಂತರ

(ಸಹಿ) ....................... .....

ಡೆ| ಕಮಿಷನರ್, ರಾಯಚೂರು ದೋಆಬ್.

ಭೀಮರಾಯನು ರಾಜನಲ್ಲ, ದೇಸಾಯಿಯಲ್ಲ. ಸಿಂಹಾಸನಕ್ಕಾಗಲಿ, ಒಡೆತನಕ್ಕಾಗಲಿ ಹೊಡೆದಾಡಿದವನಲ್ಲ. ಭಾರತವು, ಸ್ವದೇಶವು, ಪರದೇಶೀ ಬ್ರಿಟಿಷರ ಪಾಲಾಯಿತಲ್ಲಾ, ಸಕಲ ಸಂಪತ್ತು ಸೂರೆಯಾಗಿ ಹೋಗುತ್ತಿದೆಯಲ್ಲಾ, ಎಂದು ನೊಂದು, ದಾಸ್ಯದಿಂದ ಭಾರತವನ್ನು ಬಿಡುಗಡೆ ಮಾಡಲು, ಮುಂದೆ ಬಂದು, ಮಹಾ ತ್ಯಾಗಮಾಡಿ, ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ರಣರಂಗದಲ್ಲಿ ಬಿದ್ದು ಸ್ವರ್ಗಾಲಯಕ್ಕೇರಿದ ಮಹಾವೀರ. ರಾಜ ಮಹಾರಾಜರು, ದೇಸಾಯಿ ದೇಶಮುಖರು, ಜಹಗೀರದಾರ ರೈತರು ಎಲ್ಲರನ್ನೂ ಒಂದುಗೂಡಿಸಿ, ಬ್ರಿಟಿಷ್

ವಿರುದ್ಧ ಐಕ್ಯತಾರಂಗವನ್ನು ರಚಿಸುವುದರಲ್ಲಿ ಭೀಮರಾಯನು ತೋರಿಸಿದ ವ್ಯವಸ್ಥಾಕೌಶಲವು ತಲೆದೂಗಿಸತಕ್ಕಂತಹುದು. ರಾಯ ವಿಶಾಲ ಭಾರತದ ಕ್ರಾಂತಿಯ ನಾಯಕರೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದನೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಧಾರವಾಡದ ಮ್ಯಾಜಿಸ್ಟ್ರೇಟ್ [37]ಒಗಿಲ್ವಿಯು ೨೮-೮-೧೮೫೮ನೆಯ ದಿನಾಂಕ ಮುಂಬಯಿ ಸರಕಾರದ ಕಾರ್ಯದರ್ಶಿಗಳಿಗೆ ಪತ್ರ ಬರೆಯುತ್ತಾ "ಮುಂಡರಗಿ ಭೀಮರಾಯನ ವಸ್ತುಗಳಲ್ಲಿ ಈ ಪ್ರಕಟನೆಯ ಹನ್ನೆರಡು ಪ್ರತಿಗಳು ದೊರೆತುವು. ನಾನಾಸಾಹೇಬನ ಪ್ರಕಟನೆಗಳು ಉತ್ತರ ದೇಶದಲ್ಲಿ ಪ್ರಕಟವಾಗಿವೆಯಷ್ಟೆ. ಈ ಪ್ರಕಟನೆಗಳೂ ಅವನ್ನು ಹೋಲುತ್ತವೆ. ಇದರ ಭಾಷಾಂತರವನ್ನು ಗವರ್ನರ್ ಸಾಹೇಬರ ಅವಲೋಕನಕ್ಕಾಗಿ ಕಳುಹಿಸಿದ್ದೇನೆ" ಎಂದು ಹೇಳಿದ್ದಾನೆ.

## ಧೋಂಡೋ ಪಂತ್ ನಾನಾ ಪೆಷ್ವಾ ಪಂತ ಪ್ರಧಾನರ ಪ್ರಕಟನೆ.

"ಎಲ್ಲ ಸರಂಜಾಂದಾರರು, ಜಹಗೀರುದಾರರು, ದೇಶಮುಖರು, ದೇಶಪಾಂಡೆಗಳು, ಇತರ ಜಮೀನ್ದಾರರು, ಪಟೀಲರು, ಕುಲಕರಣಿಗಳು, ನಾಯಕನಾಡರು, ಶೇತಸಂದಿಗಳು ಮತ್ತು ದಕ್ಷಿಣ ದೇಶದ, ಕರ್ಣಾಟಕದ ಸಕಲ ಜನಗಳಿಗೂ ಧೊಂಡೋಪಂತ ನಾನಾ ಪೇಷ್ವಾ, ಪಂತ ಪ್ರಧಾನ ಕಡೆಯಿಂದ ಹೀಗೆ ಪ್ರಕಟನೆ ಹೊರಡತಕ್ಕದೆಂದು ಆಜ್ಞೆಯಾಗಿದೆ.

ಇಂಗ್ಲೀಷರು 'ಕಾಫಿರರು'. ವ್ಯಾಪಾರ ಸಾಸಾರ ಮಾಡುವ ನೆಪಮಾಡಿಕೊಂಡು ಅವರು ನಮ್ಮ ಸರಂಜಾಂದಾರರಲ್ಲಿ ರಾಜದ್ರೋಹಾತ್ಮಕ ದುರ್ಬೋಧನೆ ಮಾಡಿದರು; ಮೋಸ, ದ್ರೋಹ, ಇತ್ಯಾದಿಗಳನ್ನಾಚರಣೆಯಲ್ಲಿಟ್ಟುಕೊಂಡರು; ಹಿಂದೂ, ಮುಸ್ಲಿಂ ರಾಜ್ಯಗಳನ್ನೆಲ್ಲ ಆಕ್ರಮಿಸಿದರು. ಹಿಂದಿನ ರಾಜವಂಶೀಯರನೇಕರನ್ನು ಬಂಧನದಲ್ಲಿಟ್ಟರು. ಉಳಿದವರನ್ನೆಲ್ಲ ಬೀದಿಯ ಬಿಕಾರಿಗಳನ್ನಾಗಿ ಮಾಡಿದರು. ಇಷ್ಟೆಲ್ಲಮಾಡಿ, ತಾವು ರಾಜ್ಯಭಾರಮಾಡುತ್ತಾ, ಭೋಗಭಾಗ್ಯಗಳನ್ನು ಅನುಭವಿಸುತ್ತಿದ್ದಾರೆ. ಇದೆಲ್ಲ ನಿಮಗೆ ಚೆನ್ನಾಗಿ ಗೊತ್ತಿದೆ.

ನಾವು ಸಾಮ್ರಾಜ್ಯ ನಿರ್ಮಿಸಿದೆವೆಂಬ ಬಲದಿಂದ, ಈ ಕಾಫಿರರು ಮದೋನ್ಮತ್ತರಾಗಿದ್ದಾರೆ. ಮೇಲೆ ಮೇಲೆ ನ್ಯಾಯಪರರೆಂದು ವೇಷಹಾಕುತ್ತಿದ್ದಾರೆ. ಅನ್ಯಾಯ ಪ್ರವರ್ತಕರಾಗಿ ಜೀವನವನ್ನೆಲ್ಲ ಧ್ವಂಸಮಾಡಿ, ಸಕಲ ಸಂಪತ್ತನ್ನು ಸಂಪಾದನೆ ಮಾಡಿದ್ದಾರೆ. ಜನರನ್ನು ಭ್ರಾಂತಿಗೊಳಿಸಿ, ಅವರನ್ನೆಲ್ಲ ಜಾತಿಭ್ರಷ್ಟರನ್ನಾಗಿ ಮಾಡಲು ಹವಣಿಸುತ್ತಿದ್ದಾರೆ. ನಿಮ್ಮ ನಿಮ್ಮ ಜಾತಿ ಮತ ಬಿಟ್ಟುಬಿಡಿರೆಂದು ಜನರನ್ನು ಪುಸಲಾಯಿಸಲಾರಂಭಿಸಿದ್ದಾರೆ. ಸಾಧುಮಾರ್ಗದಿಂದ ಪ್ರಯೋಜನವಿಲ್ಲವೆಂದರಿತು, ಬಲಪ್ರದರ್ಶನದಿಂದ ಈ ಕಾರ್ಯಸಾಧನೆಮಾಡುವುದರಲ್ಲಾಸಕ್ತರಾಗಿದ್ದಾರೆ.

---

37 ಧಾರವಾಡದ 'ಕಲೆಕ್ಟರ' ಕಚೇರಿಯಲ್ಲಿ ಮುಂಡರಗಿ ಭೀಮರಾಯರ ಪ್ರಕರಣಕ್ಕೆ ಸಂಬಂಧಪಟ್ಟ ಪತ್ರಗಳ ಕಡತದಿಂದ. (*See* Appendix II).

ಪಾಪಭೀತರೂ, ಆಸ್ತಿಕರೂ ಆದ ಜನರನ್ನು ಕಾಫಿರ ಆಂಗ್ಲರು ಅನ್ಯಾಯ ದಿಂದ, ಅಧರ್ಮದಿಂದ, ಕಿರಾತಬುದ್ಧಿಯಿಂದ ಕಂಡು, ವರ್ತಿಸುತ್ತಿದ್ದಾರೆ. ಈ ಕಾಫಿರರನ್ನು ದಂಡಿಸಲು ನಾನು ದೇವರಿಂದಾಜ್ಞಪ್ತನಾಗಿದ್ದೇನೆ. ಅವರನ್ನು ಧ್ವಂಸಮಾಡಿ, ಹಿಂದಿನಂತೆಯೇ ಹಿಂದೂ ಮುಸ್ಲಿಂರಾಜ್ಯಗಳನ್ನು ಪುನರುದ್ಧಾರ ಮಾಡಲು ನನಗೆ ಆಜ್ಞೆಯಾಗಿದೆ. ನರ್ಮದಾ ಉತ್ತರ ದೇಶವನ್ನೆಲ್ಲಗೆದ್ದುದಾಯಿತು. ದೇಶವನ್ನೆಲ್ಲ ಸಂರಕ್ಷಿಸತಕ್ಕದ್ದೆಂದು ನನಗೆ ದೇವರ ಆಜ್ಞೆಯಾಗಿದೆ.

ದುಷ್ಟ ಕಾಫಿರರ ಆಜ್ಞೆಗೆ ತಲೆಬಾಗುವುದು ನಾಚಿಕೆ ಕೇಡು. ಈ ಪ್ರಕಟನೆಯನ್ನು ನೀವು ನೋಡಿದ ಕೂಡಲೇ ಪರಾಕ್ರಮಿಗಳಂತೆ ನೀವು ನಿಮ್ಮ ನಿಮ್ಮ ಕತ್ತಿಗಳನ್ನು ಹಿರಿದು, ಹಿಡಿದು, ತೃಣಮಾತ್ರವೂ ಕರುಣೆತೋರಿಸದೆ, ಕಾಫಿರರನ್ನು ಕತ್ತರಿಸಿ ಹಾಕಬೇಕು. ನೀವು ಹೀಗೆ ಮಾಡುವುದರಿಂದಲೇ ನಿಮಗೆ ಮುಕ್ತಿ. ಹೀಗೆ ಮಾಡುವದರಿಂದ ನೀವು ನಿಮ್ಮ ಶೌರ್ಯವನ್ನೂ ನಿಮ್ಮ ಪುರುಷ ಗೌರವನ್ನೂ ಪ್ರಕಟಿಸಿ, ಸ್ಥಾಪಿಸುತ್ತೀರಿ.

ವಿರಾಗ್ರಣಿಗಳೇ! ಆಂಗ್ಲಕಾಫಿರರು ನಿಮ್ಮ ದೇಶಕ್ಕೆ, ನಿಮ್ಮ ರಾಜ ಮಹಾ ರಾಜರಿಗೆ, ಏನೇನು ಅನ್ಯಾಯಮಾಡಿದರು,—ದ್ರೋಹಮಾಡಿದರು, ಅವರೇನೇನು ಪಾಪಕಾರ್ಯಗಳನ್ನು ಮಾಡಿದರು—ಅವುಗಳಿಗೆಲ್ಲ ಪ್ರತೀಕಾರಮಾಡುವ ಸುಸಮಯ ಈಗ ನಿಮಗೊದಗಿದೆ. ಇಂತಹ ಸುಸಂಧಿಯನ್ನು ಕಳೆದುಕೊಳ್ಳಬೇಡಿ. ಹಾಗೆ ಕಳೆದುಕೊಂಡು 'ದಕ್ಷಿಣ ದೇಶದವರು ಷಂಡರು, ಅವಿವೇಕಿಗಳು' ಎಂಬ ಅಪ ಕೀರ್ತಿಗೆ ಭಾಜನರಾಗಬೇಡಿ.

ಈಗ ಮತ ವಿಚಾರದಲ್ಲಿ ಆಂಗ್ಲರಲ್ಲಿ ತಮ್ಮ ತಮ್ಮೊಳಗೇ ಜಗಳಹುಟ್ಟಿದೆ. ತಮ್ಮ ತಮ್ಮಲ್ಲೇ ಕಚ್ಚಾಡಿ, ಕಡಿದಾಡುತ್ತಿದ್ದಾರೆ. ಫ್ರೆಂಚರೂ, ರಷ್ಯನರೂ, ದೀರ್ಘಕಾಲದಿಂದಲೂ ಆಂಗ್ಲದ್ವೇಷಿಗಳು. ಆಂಗ್ಲರನ್ನು ಹಿಂದೂಸ್ಥಾನದಿಂದ ಓಡಿಸಲು ಅವರು ಹಂಚಿಕೆ ಹಾಕುತ್ತಲೇ ಇದ್ದಾರೆ. ತಮ್ಮ ಉದ್ದೇಶ ಸಾಧನೆಗೆ ಇದು ತಕ್ಕ ಸಮಯವೆಂದವರು ಯೋಚನೆಮಾಡುತ್ತಿದ್ದಾರೆ. ಈ ಉದ್ದೇಶ ದಿಂದಲೇ ಮೂರು ತಿಂಗಳಿಂದಲೂ ಅವರು ಸಮುದ್ರ ಮುಖವಾಗಿ ತಮ್ಮ ತಮ್ಮ ಸೈನ್ಯಗಳನ್ನು ಕಳುಹಿಸುತ್ತಿದ್ದಾರೆ. ಈ ಕಾಫಿರರ ಮೇಲೆ ಚೀಣಾ ದೇಶೀಯರು ಸಹ ಯುದ್ಧವನ್ನಾರಂಭಿಸಿದ್ದಾರೆ. ಚೀಣರ ಮೇಲೆ ಸೈನ್ಯಗಳನ್ನು ಕಳುಹಿಸಲು ಆಂಗ್ಲರಿಗೆ ಸಾಕಾದಷ್ಟು ಸೈನ್ಯಬಲವಿಲ್ಲ. ಆದಕಾರಣ ಅವರಿಗೆ ಮಹಾಭಯ ವುಂಟಾಗಿದೆ. ನಮ್ಮ ಸಹಾಯಕ್ಕಾಗಿ ಪರ್ಶಿಯನರೂ, ಅಫ್‌ಘನರೂ, ಬಲೂ ಚಿಗಳೂ ಸೈನ್ಯಗಳೊಂದಿಗೆ ಸಿದ್ಧರಾಗಿದ್ದಾರೆ.

ಹೆಚ್ಚೇನು; ಈ ದೇಶದಿಂದ ಆಂಗ್ಲರನ್ನು ನಿರ್ಮೂಲಗೊಳಿಸಲು ಇದು ಸುವರ್ಣ ಸಮಯ! ಆಂಗ್ಲ ಕಾಫಿರರು ಜನರಲ್ಲಿ ತಪ್ಪುತಿಳಿವಳಿಕೆ ಹುಟ್ಟಿಸಲು, ಅಧೈರ್ಯಗೊಳಿಸಲು, ಸುಳ್ಳು ಸುದ್ದಿಯ ಕಂತೆಗಳನ್ನು ಸಿದ್ಧಗೊಳಿಸಿ ಹರಡುತ್ತಿದ್ದಾರೆ. ತಾವು ದೆಹಲಿ ಮುಂತಾದ ಸ್ಥಳಗಳನ್ನಾಕ್ರಮಿಸಿಕೊಂಡಿರುವರಂತೆ. ನಮ್ಮ ನ್ನೆಲ್ಲ ಸೋಲಿಸಿರುವರಂತೆ. ಈ ಸುದ್ದಿಗಳನ್ನು ನಂಬಬೇಡಿ. ಈಗ ಈ ಸಂದರ್ಭ ವನ್ನು ನೀವು ಕಳೆದುಕೊಂಡಿರಾದರೆ ನೀವು ನಮ್ಮ ದಂಡಕ್ಕೆ ಗುರಿಯಾಗುವಿರಿ. ಈ ಅಪರಾಧಕ್ಕಾಗಿ ನೀವು ನಿಮ್ಮ ಜಾಗೀರು ಜಮೀನುಗಳೇನುಂಟು, ಅಥವಾ

ನಿಮ್ಮ ಜೀವನೋಪಾಯ ಸಾಧನೆಗಳೇನುಂಟು, ಅವುಗಳನ್ನೆಲ್ಲ ವಶಪಡಿಸಿ ಕೊಳ್ಳಲಾದೀತು.

ಈ ಪ್ರಕಟನೆಯನ್ನು ಉಲ್ಲುಷಹ ಬಂದಿಗಿ ಉಲ್ಲು ಹುಜೂರ್ ದೆಹಲಿ ಪಾದಷಾರವರ ಆಜ್ಞೆಯಂತೆ ಪ್ರಕಟಿಸಲಾಗಿದೆ.

ರಾವ್ ಪಂತ್ ಪ್ರಧಾನ ಪೇಷ್ವಾ.

ನಿಜವಾದ ಭಾಷಾಂತರ,

(ಸಹಿ) ಒಗಿಲ್ವಿ,

ಮ್ಯಾಜಿಸ್ಟ್ರೇಟ್.

---



**ಸುರಪುರ ಕೋಟೆಯ ಮಹಾದ್ವಾರ**

[ಶ್ರೀ ಕುಮಾರ ನಾಯಕರವರ ಕೃಪೆಯಿಂದ.

# ೪. ಹಲಗಲಿಯ ಮಹಾವೀರರು

ಮುಧೋಳ ಅಥವಾ ಪ್ರಾಚೀನ ಮುದುವೊಳಲು ಎಂಬುದೊಂದು ಸಣ್ಣ ಸಂಸ್ಥಾನ. ಹಲಗಲಿಯೆಂಬುದು ಅದರಲ್ಲೊಂದು ಹಳ್ಳಿ. ಬೇಡರೇ ಅಲ್ಲಿ ಪ್ರಧಾನ ನಿವಾಸಿಗಳು; ಶಸ್ತ್ರೋಪ ಜೀವಿಗಳವರು. ೧೮೫೭ರಲ್ಲಿ ಸ್ಫೋಟನವಾಗಿ ಭಾರತದ ನಾನಾಕಡೆಗಳಲ್ಲಿ ನಾನಾ ರೂಪವಾಗಿ ಆ ಕಿಡಿಗಳು ಪರಿಣಮಿಸಿದುವು. ಹಲಗಲಿಯಲ್ಲಿ ಆದು ತಾಳಿದ ಸ್ವರೂಪವೇ ಬೇರೆ. ಈ ಸ್ವರೂಪದ ಬಂಡಾಯಕ್ಕೆ ಇದೊಂದೇ ಉದಾಹರಣೆಯೆಂದು ಕಂಡುಬರುತ್ತದೆ.

ದಕ್ಷಿಣ ಮಹಾರಾಷ್ಟ್ರದ ರಾಜಕೀಯ ಪ್ರತಿನಿಧಿ ಲೆಫ್ಟಿನೆಂಟ್ ಕರ್ನಲ್ ಜಿ. ಬಿ. ಸೆರ್ಟ ಕರ್ ಎಂಬವ ೧೮೫೭ನೆಯ ನಿಶ್ಶಸ್ತ್ರೀಕರಣ ಶಾಸನದಂತೆ ಒಂದಾಜ್ಞೆ ಹೊರಡಿಸಿದ. ಅಕ್ಟೋಬರ್ ತಿಂಗಳಲ್ಲಿ ಮುಧೋಳದ ಕಾರಬಾರಿಗೂ ಈ ಆಜ್ಞೆ ಬಂತು. ಕಾರಬಾರಿಯು ಆ ಆಜ್ಞೆಗೆ ತಲೆಬಾಗಿ, ನವೆಂಬರ್ ಹತ್ತರೊಳಗಾಗಿ ಹಲವು ಗ್ರಾಮಗಳಲ್ಲಿ ಆಜ್ಞೆಯನ್ನು ಆಚರಣೆಗೆ ತಂದ. ಈ ಆಜ್ಞೆಯಂತೆ ಪ್ರತಿಯೊಬ್ಬರೂ ತಮ್ಮಲ್ಲಿರುವ ಶಸ್ತ್ರಗಳನ್ನು 'ರೆಜಿಸ್ಟರ್' ಮಾಡಿಸಬೇಕು. ಯಾರೊಬ್ಬರೂ ಸರಿಯಾದ ರಹದಾರಿ ಪಡೆಯದೆ ಶಸ್ತ್ರಗಳನ್ನು ಇಟ್ಟುಕೊಳ್ಳಬಾರದು. ಭಾರತದ ಸ್ವಾತಂತ್ರ್ಯ ಸಾಧನೆಯ ಇತಿಹಾಸದಲ್ಲಿ ಈ 'ನಿಶ್ಶಸ್ತ್ರೀಕರಣ ಶಾಸನ'ದ ಸ್ಥಾನ ಬಹಳ ದೊಡ್ಡದು. 'ಕುರುಕ್ಷೇತ್ರ'ದ ಪವಿತ್ರನಾಮೋಚ್ಚಾರದಿಂದ ಪ್ರಖ್ಯಾತವೆನಿಸಿದ, 'ವೀರಭೂಮಿ' ಯೆಂದು ವಿಶ್ವತೋಮುಖವಾಗಿ ಹೊಗಳಿಸಿಕೊಂಡ ಭರತಖಂಡವು 'ಷಂಡರ ಖಂಡ' ವಾಯಿತು. ಈ ಶಾಸನವು ಭಾರತದ ದೇಹಕ್ಕೆ ಕೊಟ್ಟ ನೋವಿಗಿಂತ ಅದರ ಆತ್ಮಕ್ಕೆ ಕೊಟ್ಟನೋವು ಅವರ್ಣನೀಯವಾದದ್ದು; ಊಹೆಗೆ ಸಹ ನಿಲುಕದಂತಹುದು. ಈ ಕಠೋರ ಶಾಸನವು ಆಚರಣೆಗೆ ಬಂದ ಆರಂಭಕಾಲದಲ್ಲಿ, ಅದನ್ನು ಪ್ರತಿಭಟಿಸಿ ನಿಂತು, ಪ್ರಾಣಗಳನ್ನರ್ಪಿಸಿದ ಕೀರ್ತಿ ಪ್ರತಿಷ್ಠೆ ಹಲಗಲಿಯ ವೀರಬೇಡರಿಗೆ ಸಲ್ಲುತ್ತದೆ. ಈ ಅಜ್ಞಾತವೀರರ ಚರಿತ್ರೆಯೇ, ಪರಾಕ್ರಮ ಪೂರಿತ ಜೀವನವೇ, ಮುಂದಿನ ಸ್ವಾತಂತ್ರ್ಯ ಸಾಧಕರಿಗೆ ಮೂಲಾಧಾರ, ಸ್ಫೂರ್ತಿ.

ಮುಧೋಳ ಕಾರಬಾರಿಯು ಸೆರ್ಟ ಕರನ ಆಜ್ಞೆಯನ್ನು ಹಲಗಲಿಯಲ್ಲೂ ಆಚರಣೆಗೆ ತರಲಾರಂಭಿಸಿದ. ಹಲಗಲಿಯವರಿದಕ್ಕೆ ಒಪ್ಪಲಿಲ್ಲ. 'ರಾಜಭಕ್ತ' ಕಾರಬಾರಿಯು ಸಾಮೋಪಾಯದಿಂದ ಕಾರ್ಯಸಾಧನೆ ಮಾಡಲಾರಂಭಿಸಿದ. ಬೇಡರ ಮುಖಂಡ ಜಮಾದಾರ ಗುಡಗಿಯಾ ಎಂಬವನನ್ನು ೧೧-೧೧-೧೮೫೭ರಲ್ಲಿ ಸಮುಖಕ್ಕೆ ಕರೆಸಿಕೊಂಡ. ಗುಡಗಿಯೂ ಕೇಳದೆಯೇ, ಕಾರಬಾರಿ ತಾನಾಗಿ ತಾನೇ, ಅವನಿಗೊಂದು ಬಂದೂಕು ರಹದಾರಿಕೊಟ್ಟ. ಹೀಗೆಯೇ ಇತರ ಸನ್ನದಿೀಗಳೂ ಬಂದು, ರಹದಾರಿ ಚೀಟಿಗಳನ್ನು ತನ್ನಿಂದ ಪಡೆದುಹೋಗುವಂತೆ ಜನರಿಗೆಲ್ಲ ತಿಳಿಯಪಡಿಸಬೇಕೆಂದು ಗುಡಗಿಯಾಗೆ ಹೇಳಿದ. ಕಾರಬಾರಿಯ ಸೂಚನೆಯಂತೆ ಗುಡಗಿಯಾ ತನ್ನವರಿಗೆಲ್ಲ 'ಉಪದೇಶ'ಮಾಡಿದ. ಆದರೆ ಹಲಗಲಿಯವರು ಇದಕ್ಕೆ ಕಿವಿಗೊಡಲಿಲ್ಲ. ನಮ್ಮ ಮಾನ, ಪ್ರಾಣ, ಆಸ್ತಿಪಾಸ್ತಿ,

ಊರುಕೇರಿ, ಸಂರಕ್ಷಣೆಗಾಗಿ ಶಸ್ತ್ರಧರಿಸುವ ಹಕ್ಕು ನಮಗುಂಟು. ಶಸ್ತ್ರಗಳನ್ನು ಹಿಡಿಯಲು ರಹದಾರಿ ಪಡೆಯಬೇಕೆಂದು ಹೇಳುವುದು ಯಾವ ನ್ಯಾಯ. ಇದು ಸಲ್ಲದು—ಈ ರೀತಿಯಾಗಿ ವಾದಿಸಿದರು. ಕಾರಬಾರಿಯು ನಿರೀಕ್ಷಿಸಿದಂತೆ ಹಲಗಲಿಯವರು ಯಾರೂ ಅವನ ಬಳಿಹೋಗಲಿಲ್ಲ. 'ರಹದಾರಿ' ಎಂಬ ಮಾತು ಕಿವಿಗೆ ಬಿದ್ದಕೂಡಲೆ ಅವರು ಕೋಪದಿಂದ ಕೆರಳಿ, ಅವಮಾನದಿಂದ ನೊಂದು, ರೊಚ್ಚಿಗೇಳುತ್ತಿದ್ದರು. ಅಷ್ಟುಮಾತ್ರವಲ್ಲ; ಹಲಗಲಿಯವರು ನೆರೆಹೊರೆ ಹಳ್ಳಿಗಳಲ್ಲಿ ಸಹ ನಿಶ್ಶಸ್ತ್ರೀಕರಣ ಶಾಸನವಿರುದ್ಧ ಪ್ರಚಾರಕ್ಕಾರಂಭಿಸಿದರು.

ಈ ಪ್ರತಿಭಟನೆ, ಈ ಪ್ರಚಾರ, ಉಗ್ರರೂಪ ತಾಳುತ್ತಬಂತು. ಕಾರಬಾರಿ ಯಾದರೋ ಮೇಲಿನವರ ಒತ್ತಾಯಕ್ಕೆ ಸಿಕ್ಕಿ ಈ ಚಳವಳಿಯನ್ನು ಹೇಗಾದರೂ ಮಾಡಿ ಮಟ್ಟಹಾಕುವ ಹಂಚಿಕೆ ಹಾಕಿದ. ೧೫-೧೧-೧೮೫೭ನೆಯ ದಿನ ರಾಮರಾವ್ ಭುಜಂಗನೆಂಬ ಗುಮಾಸ್ತೆಯೊಬ್ಬನನ್ನು ಕಳುಹಿಸಿದ. ಅವನು ಹಲಗಲಿಗೆ ಬಂದು, ಸನ್ನದಿಗಳಿಗೆಲ್ಲ "ನೀವೆಲ್ಲ ನಿಮ್ಮ ಶಸ್ತ್ರಗಳೊಂದಿಗೆ ಬಂದು 'ರೆಜಿಸ್ಟರ್' ಮಾಡಿಸಿ" ರೆಂದು ಹೇಳಿದ. ಜನರೆಲ್ಲ ಏಕಕಂಠದಿಂದ 'ಇದು ಅವಮಾನಕರವಾದ ಆಜ್ಞೆ. ಇದನ್ನು ನಾವು ಪಾಲಿಸುವುದಿಲ್ಲ' ಎಂಬದಾಗಿ ಹೇಳಿ, ರಾಮರಾಯನನ್ನು ಹೆದರಿಸಿ, ಓಡಿಸಿಬಿಟ್ಟರು. ಇತರ ಹಳ್ಳಿಗಳಲ್ಲಿ 'ರೆಜಿಸ್ಟರ್'ಮಾಡಿಸುವ ಮತ್ತು ರಹದಾರಿಗಳನ್ನು ಕೊಡುವ ಕೆಲಸಮುಗಿಸಿ ಆನಂತರ ಹಲಗಲಿಯ ಕಡೆ ಗಮನಕೊಡೋಣವೆಂದಾಲೋಚಿಸಿದ, ರಾಮರಾಯ. ತಡ ಮಾಡಿದರೆ ತೊಂದರೆ ತೀರೀತೆಂಬ ಕಲ್ಪನೆ ಅವನದು. ೨೦-೧೧-೧೮೫೭ನೆಯ ದಿನ ಕಾರಬಾರಿಯು ಹಲಗಲಿಯ ವೀರಪ್ಪನಾಯಕನನ್ನು ಕರೆಸಿಕೊಂಡು ಮಾತ ನಾಡಿದ. ಹಲಗಲಿಯ ಬೇಡರು ಆಯುಧಗಳನ್ನು 'ರೆಜಿಸ್ಟರ್' ಮಾಡಿಸುವುದಕ್ಕೆ ಸಿದ್ಧರಾಗಿಲ್ಲ. ಈ ವಿಚಾರದಲ್ಲವರು ದೃಢಪ್ರತಿಜ್ಞರಾಗಿದ್ದಾರೆಂದು ವೀರಪ್ಪ ನಾಯಕ ವಿವರಿಸಿದ.

ಇಷ್ಟಾದರೂ ಕಾರಬಾರಿಯು ಮಾರನೆಯ ದಿನವೇ ಭೀಮರಾವ್ ಅನಂತ ಘೋರ್ಪಡೆ, ನರೋ ರಾಮಚಂದ್ರ ಪೊಟ್ನೀಸ್, ಮತ್ತಿನ್ನಿಬ್ಬರನ್ನು ಹಲಗಲಿಗೆ ಕಳುಹಿಸಿ, ಅವರ ಮೂಲಕ ಬೇಡರಿಗೆ ಬುದ್ಧಿ ಹೇಳಿಸಲು ಪ್ರಯತ್ನಮಾಡಿ ನೋಡಿದ. ರಾಮಚಂದ್ರ, ಭೀಮರಾಯರು ಹಲಗಲಿಗೆ ಬಂದಿಳಿಯುವುದೇ ತಡ ಜಮಾದಾರ್ ಗಿಡಗಿಯಾ, ಸನ್ನದಿ ಬಾಲ, ಇವರಿಬ್ಬರೂ ನೂರುಮಂದಿ ಬೇಡರನ್ನು ಸೇರಿಸಿ ಕೊಂಡು ನುಗ್ಗಿದರು. ಕಾರಬಾರಿಯ ಆಜ್ಞೆಹೊತ್ತು ಬಂದವರನ್ನು ಎದುರಿಸಿ, 'ಸುಡುತ್ತೇವೆ, ಇರಿಯುತ್ತೇವೆ' ಎಂದು ಹೆದರಿಸಿದರು. ಆದರೆ ಅವರನ್ನು ಕೊಲ್ಲದೆ, ಹಲಗಲಿ ಗ್ರಾಮದಿಂದ ಓಡಿಸಿಬಿಟ್ಟರು. ಇಷ್ಟಾದರೂ ಕಾರಬಾರಿಗೆ ತಾನು ಹಿಡಿದ ದಾರಿಯಲ್ಲಿ ವಿಶ್ವಾಸ ಹೋಗಲಿಲ್ಲ; ಹಲಗಲಿಯ ಬೇಡರ ಮನೋ ದಾರ್ಢ್ಯವನ್ನು ಗ್ರಹಿಸುವಷ್ಟು ಭಾವನಾಶಕ್ತಿ ಅವನಿಗಿರಲಿಲ್ಲ. ೨೩-೧೧-೧೮೫೭ ನೆಯ ದಿನ ಅಪ್ಪ ಅರಕೆರಿಯೆಂಬವನನ್ನು ಮತ್ತೆ ರಾಯಭಾರಕ್ಕಾಗಿ ಹಲಗಲಿಗೆ ಕಳುಹಿಸಿದ. ಅದೂ ಪ್ರಯೋಜನವಾಗಲಿಲ್ಲ. ಹಲಗಲಿ ಬೇಡರ ಸ್ಥಿರಸಂಕಲ್ಪಕ್ಕೂ, ಮುಧೋಳ ಕಾರಬಾರಿಯ ವಿಸ್ಮಯ ಸಹನೆಗೂ ಒಂದು ಸ್ಪರ್ಧೆಯೇ ನಡೆಯಿತು. ಕಟ್ಟಕಡೆಯದಾಗಿ ಕಾರಬಾರಿ ಬಂಟನೂರಿನ ವೀರಹನುಮನಾಯಕನ ವಿಶ್ವಾಸ

ಸಂಪಾದಿಸಿ, ಹಲಗಲಿಯ ಬೇಡರೊಂದಿಗೆ ಶಾಂತಿಯುತ ತೀರ್ಮಾನಕ್ಕೆ ಬರಲು ಸಂಧಾನಮಾಡಿದ. ವೀರಹನುಮನಾಯಕ ಈ ಕೆಲಸಕ್ಕೊಪ್ಪಿ ಹಲಗಲಿಗೆ ಪ್ರಯಾಣಮಾಡಿದ. ಆ ಊರಿನ ಬೇಡರು ನಾಯಕನ ಮಾತಿಗೆ ಕಿವಿಗೊಡುವುದು ಹಾಗಿರಲಿ, ಅವನನ್ನು ಊರಿನೊಳಕ್ಕೇ ಬರಗೊಡಿಸಲಿಲ್ಲ. ಬಂಟನೂರಿನಲ್ಲಿ ಸರಕಾರದವರು ತಮ್ಮಿಚ್ಛೆಬಂದಂತೆ ವರ್ತಿಸಲು ವೀರಹನುಮ ಅವಕಾಶಕೊಟ್ಟ ನಲ್ಲಾ ಎಂಬ ಕೋಪದಿಂದ ಉರಿದೆದ್ದು, ಅವನನ್ನು ಕೊಲ್ಲುವುದಕ್ಕೆ ಸಹ ಸಿದ್ಧ ರಾಗಿದ್ದರು. ಹೀಗೆ ಕಾರಬಾರಿಯ ಪ್ರಯತ್ನಗಳೆಲ್ಲ ಮಣ್ಣುಗೂಡಿದುವು.

೨೭-೧೨-೧೮೫೭ ನೆಯ ದಿನಾಂಕ ಲೆಫ್ಟಿನೆಂಟ್ ಕರ್ನಲ್ ಮಾಲ್ಕಂ ಕಡೆ ಯಿಂದ ಕಾರಬಾರಿಗೆ ಯಾದಿಯೊಂದು ಬಂತು. ಜನರೆಲ್ಲ ಶಸ್ತ್ರಪಾಣಿಗಳಾಗಿ ಹಲಗಲಿ ಯಲ್ಲಿ ಬಂಡಾಯವನ್ನೆಬ್ಬಿಸಿರುವ ಹಾಗೂ, ಅದನ್ನು ಕುರಿತು ವಿಚಾರಣೆಮಾಡಿ, ವಿವರಗಳನ್ನು ತಿಳಿಸಬೇಕೆಂಬದಾಗಿಯೂ, ಹ್ಯಾವಲಾಕರು ಬರೆದಿರುವುದಾಗಿ ಆ ಯಾದಿಯಿಂದ ತಿಳಿದುಬಂತು. ಈ ಮಧ್ಯೆ ಬೂದ್ನಿ ಮತ್ತು ಮಂಟೂರು ಗ್ರಾಮಗಳ ಸನ್ನದಿಗಳೂ ಸಹ ಸಶಸ್ತ್ರರಾಗಿ ಹಲಗಲಿಯ ಜನರೊಂದಿಗೆ ಸೇರಿದ ರೆಂಬ ಸುದ್ದಿಯೂ ಕಾರಬಾರಿಗೆ ಬಂತು. ಆ ಸುದ್ದಿಯನ್ನೂ ಕಾರಬಾರಿಯು ಲೆಫ್ಟಿನೆಂಟ್ ಕರ್ನಲ್ ಮಾಲ್ಕಂಗೆ ತಿಳಿಸಿದ. ಆಲಗುಂದಿಯ ಬೇಡರೂ ಸಹ ಹಲಗಲಿಗೆ ಹೋದ ವಾರ್ತೆ ಬಂತು. ಅದನ್ನೂ ಕಾರಬಾರಿಯು ಮಾಲ್ಕಂ ಗಮನಕ್ಕೆ ತಂದ. ಅವರ ಉದ್ದಿಶ್ಯವೇನೆಂಬುದೇ ಗೊತ್ತಾಗಲಿಲ್ಲ. ಅದನ್ನು ತಿಳಿಯಲು ಜನರನ್ನು ಕಳುಹಿಸಿದಾಗ ಅವರನ್ನು ಹಳ್ಳಿಯೊಳಕ್ಕೇ ಜನರು ಪ್ರವೇಶ ಮಾಡಗೊಡಲಿಲ್ಲವೆಂದೂ ತಿಳಿಸಿದ.

ಅಷ್ಟರೊಳಗೆ ಲೆಫ್ಟಿನೆಂಟ್ ಕರ್ನಲ್ ಮಾಲ್ಕಂನಿಂದ ಆಜ್ಞಪ್ತನಾಗಿ ಲೆಫ್ಟಿನೆಂಟ್ ಕರ್ನಲ್ ಸೆರ್ಟಿಕರ್ ದಕ್ಷಿಣ ಮರಾಠಾ ಬಿಜಾಪುರದ ಅಶ್ವದಳದೊಂದಿಗೆ ಪೂರ್ವದ ಕಡೆಯಿಂದ ಹೊರಟು ೨೯-೧೧-೧೮೫೭ನೆ ದಿನಾಂಕ ಬೆಳಗ್ಗೆ ಹತ್ತು ಘಂಟೆ ವೇಳೆಗೆ ಹಲಗಲಿಗೆ ಬಂದ. ವೀರ ಬೇಡರಿವನ ಮೇಲೆ ಬಿದ್ದರು. ಸೆರ್ಟಿಕರ್ ಸೈನಿಕ ರಿಂದ ಹಳ್ಳಿಯನ್ನು ಸುತ್ತುಗಟ್ಟಿ “ನಿಮ್ಮ ಶಸ್ತ್ರಾಸ್ತ್ರಗಳನ್ನೆಲ್ಲ ಕೆಳಗಿಡಿ; ಶರಣಾಗತ ರಾಗಿ” ಎಂಬದಾಗಿ ಬೇಡರಿಗೆ ಹೇಳಿದ. ಬೇಡರ ಪಡೆ ಕೇವಲ ೫೦೦ ಮಾತ್ರವಿತ್ತು. ಆದರೂ ಬ್ರಿಟಿಷ್ ಸೈನ್ಯಬಲದಿಂದವರು ಭೀತರಾಗಲಿಲ್ಲ; ಬ್ರಿಟಿಷ್ ದಂಡ ನಾಯಕನಿಗವರು ಜಗ್ಗಲಿಲ್ಲ. ಬಂದೂಕುಗಳನ್ನು ಹಾರಿಸುತ್ತ ‘ಇದೇ ಉತ್ತರ’ ಅಂದರು. ಶಸ್ತ್ರಗಳನ್ನು ಒಪ್ಪಿಸುವುದಕ್ಕಿಂತ ಮರಣವನ್ನಪ್ಪುವುದೇ ಲೇಸೆಂದವರು ನಂಬಿದರು. ಯುದ್ಧ ಮೊದಲಾಯಿತು; ರಾತ್ರಿಯೆಲ್ಲ ಹೊಡೆದಾಟಗಳಾದುವು.

ಬೆಳಗಾಗುವುದರೊಳಗಾಗಿ ೩೦-೧೧-೧೮೫೭ ನೆಯ ದಿನಾಂಕ ಲೆಫ್ಟಿನೆಂಟ್ ಮತ್ತು ಅಡ್ಜುಟಂಟ್ ಲಾ ಟೌಕೆ, ಲೆಫ್ಟಿನೆಂಟ್ ಕರ್ನಲ್ ಮಾಲ್ಕಂ, ಸೈನ್ಯದೊಂ ದಿಗೆ ಬಂದು ಸೇರಿದರು. ಬಾಗಲಕೋಟೆಯಿಂದಲೂ ೨೮ನೆಯ ಪಡೆ ಬಂತು. ಇಷ್ಟು ಪ್ರಬಲ ಸಂಖ್ಯಾತ ಸೈನ್ಯ ಸೇರಿದರೂ ಬೇಡರು ಅಂಜಲಿಲ್ಲ, ಅಳುಕಲಿಲ್ಲ. ತಮ್ಮ ದೃಢ ಪ್ರತಿಜ್ಞೆಯನ್ನು ಸಡಲಿಸಲಿಲ್ಲ. ಶಸ್ತ್ರಧಾರಣವೇ ವೀರಲಾಂಛನವೆಂಬ ಭಾವದಿಂದ ಉನ್ಮತ್ತರಾಗಿ, ಜೀವಗಳ ಮೇಲೆ ಹಂಗು ತೊರೆದು, ಅತುಳಬಲದ ಬ್ರಿಟಿಷರೊಂದಿಗೆ ಹೋರಾಡಿದರು.

ಸೈನ್ಯಬಲದಿಂದ ಕೂಡಿದ್ದ ಮಾಲ್ಕಂ ಸುಲಭವಾಗಿ ಹಳ್ಳಿಯನ್ನಾಕ್ರಮಿಸ ಬಹುದಾಗಿತ್ತು. ಹಾಗೆ ಮಾಡಲಿಲ್ಲ; ಓಡಿಹೋಗುತ್ತಿದ್ದ ಬಂಡುಗಾರರನ್ನು ಹಿಂದಟ್ಟಿಕೊಂಡು ತಾನೂ ಓಡಿದ. ಹಳ್ಳಿಯೊಳಗಾಗಲೆ ಅಲ್ಲಲ್ಲಿ ಹಲವು ಸೈನಿಕರಿದ್ದರು. ಬೇಡ ವೀರರನೇಕರು ಬಚ್ಚಿಟ್ಟುಕೊಂಡಿದ್ದರು. ಮಾಲ್ಕಂ ಓಡಿದನೆಂದು ತಿಳಿದು ತಮ್ಮ ತಮ್ಮ ಗುಪ್ತಕ್ಷೇತ್ರಗಳಿಂದ ಬೇಡರು ಹೊರಬಿದ್ದರು. ಅಪೂರ್ವ ಕ್ಷಾತ್ರತೋರಿಸಿ ಬ್ರಿಟಿಷ ಸೈನಿಕರಮೇಲೆ ಬಿದ್ದು ಹೋರಾಡಿದರು. ಈ ವೀರರಿಂದ ತಮಗೆ ಉಳಿಗಾಲವಿಲ್ಲವೆಂದರಿತು, ದಾರಿಗಾಣದೆ, ಲೆಫ್ಟಿನೆಂಟ್ ಕರ್ನಲ್ ಕರ್ ಹಳ್ಳಿಗೆ ಬೆಂಕಿಹಚ್ಚಿದ. ಹಲಿಗಲಿ ಹಳ್ಳಿಯು ನಾಯಕ ನರಕವೇ ಆಯಿತು. ಬೇಡರ ಯಾತನೆ ಅಷ್ಟಿಷ್ಟಲ್ಲ. ೨೯೦ ಮಂದಿಯನ್ನು ಕೈಸೆರೆ ಹಿಡಿದರು. ಅನೇಕರು ಕಡೆಯುವರೆಗೂ ಕಡಿದಾಡಿ ರಣಭೂಮಿಯಲ್ಲಿ ಬಿದ್ದರು. ಬಂದಿಗಳಲ್ಲಿ ೧೯ ಮಂದಿಯನ್ನು ವಿಚಾರಣೆಗೆ ಒಳಪಡಿಸಿ, ೧೩ ಮಂದಿ ಮುಂಖಡರನ್ನು ಮುಧೋಳದಲ್ಲಿ ೧೧-೧೨-೧೮೫೭ನೆಯ ದಿನ ಗಲ್ಲಿಗೆ ಹಾಕಿದರು. ಮುಧೋಳದಲ್ಲಿ ಅಂದು ಸಂತೆ. ಸಂತೆಯು ಜನರೆಲ್ಲ ತಮ್ಮ ಪರಾಕ್ರಮ ಬಲವೆಷ್ಟೆಂಬುದನ್ನು ನೋಡಿ ಪಾಠಕಲಿಯಲೆಂದೋ ಅನ್ನುವಂತೆ ಬ್ರಿಟಿಷ್ ಅಧಿಕಾರಿಗಳು ಅವರನ್ನೆಲ್ಲ ಗಲ್ಲಿಗೇರಿಸಿದರು. ೧೪-೧೨-೧೮೫೭ನೆ ದಿನ ಉಳಿದ ಆರು ಮಂದಿಯನ್ನು ಹಲಗಲಿಗೆ ಕರತಂದು ಅವರನ್ನೂ ಗಲ್ಲಿಗೆ ಹಾಕಿದರು.

ಬಂಡಾಯಗಾರರಲ್ಲಿ ಪ್ರಮುಖನೊಬ್ಬ ಬಾಬಾಜಿ ಬಿನ್ ಸೊವಜಿ ನಿಂಬಾಲ್ಕರ್ ಎಂಬವ. ಇವನು ಹೊಡೆದಾಡುತ್ತಲೇ ಯುದ್ಧಭೂಮಿಯಲ್ಲಿ ಬಿದ್ದ. ಯುದ್ಧ ಭೂಮಿಯಿಂದ ತಪ್ಪಿಸಿಕೊಂಡು ಓಡಿಹೋದ ಬಂಡುಗಾರರನ್ನು ಹುಡುಕಿ, ಹಿಡಿಯಲು, ಅಸಾಧ್ಯ ಪ್ರಯತ್ನಗಳಾದುವು. ಆದರೆ ಅವರೆಲ್ಲ ಸುರಪುರಕ್ಕೆ ಹೋಗಿ, ಅಲ್ಲಿ ಆಶ್ರಯ, ರಕ್ಷಣೆ, ಪಡೆದರೆಂದು ಹೇಳಲಾಗಿದೆ.

೧೮೫೭ರಲ್ಲಿ ಆಚರಣೆಯಲ್ಲಿ ಇದ್ದದ್ದು [38] ಶಸ್ತ್ರನಿರಾಕರಣ ಶಾಸನ ೧೮೭೭ರಲ್ಲಿ ಲಾರ್ಡ್ ಲಿಟ್ಟನರವರ ಕಾಲದಲ್ಲಿ [39] ಭಾರತ ಶಸ್ತ್ರಾಸ್ತ್ರಗಳ ಶಾಸನವಾಯಿತು. ವೈಸರಾಯರ ಈ ಶಾಸನವನ್ನು ಭಾರತೀಯರು ತೀವ್ರವಾಗಿ ವಿರೋಧಿಸಿ, ಖಂಡಿಸಿದರು.

> ". . . ವೈಸರಾಯರ ಈ ಶಾಸನವು ಸಾರ್ವಜನಿಕಾಭಿಪ್ರಾಯದ ಮನೋಲ್ಲಂಘನಮಾಡಿತು; ಅದರ ಮೇಲೆ ಅತ್ಯಾಚಾರ ನಡೆಸಿತು. ಸರಕಾರದ ರಹದಾರಿ ಇಲ್ಲದೆ ಭಾರತೀಯರು ಯಾರೂ ಶಸ್ತ್ರಧಾರಣ ಮಾಡದಂತೆ ಅಡ್ಡಿಪಡಿಸಿತು. ಪರದೇಶಿಗಳು, ಐರೋಪ್ಯರು, ಯೂರೇಷಿಯನ್ನರು, ಆಂಗ್ಲೋ-ಇಂಡಿಯನ್ನರು ಯಾರನ್ನೂ ಇದು ತಾಗಲಿಲ್ಲ. ಸಮುದ್ರದಲೆಗಳು ಭಾರತ ದಡಕ್ಕೆ ತಂದೆಸೆದ ಭೂಲೋಕದ ನೀಚರು ಯಾರನ್ನೂ, ಇದು ಬಾಧಿಸಲಿಲ್ಲ. ಭಾರತೀ

[38] Disarming Act of 1857.

[39] The Arms Act of 1877.

ಯರಿಗೂ ಐರೋಪ್ಯರಿಗೂ ದುರಂತ ಪರಿಣಾಮದ ತಾರತಮ್ಯ ಭಾವನೆಯನ್ನಿದು ತಂದೊಡ್ಡಿತು." 40

ಸುರೇಂದ್ರನಾಥ ಬ್ಯಾನರ್ಜಿಯವರಾದರೂ ಈ ಶಾಸವನ್ನು ಕುರಿತು ಹೇಳಿದ ಮಾತನ್ನು ಗಮನದಲ್ಲಿಡಬೇಕು.

". . . . ಭಾರತೀಯರನ್ನು ನಂಬದ, ಅವರನ್ನು ಸಂಶಯದಿಂದ ನೋಡುವ ನೀತಿಯ, ಆರಂಭೋತ್ಸವ ಕಾರಣ ವಾಯಿತೀ ಶಾಸನ. ಖಂಡಿತವಾಗಿಯೂ ನಮ್ಮವರಿದಕ್ಕರ್ಹರಲ್ಲ; ನಮ್ಮ ಜನರಿದನ್ನು ತೀವ್ರವಾಗಿ ಖಂಡಿಸುತ್ತಾರೆ. ಇದರಿಂದ ನಾವು ಕೀಳುಕುಲಕ್ಕೆ ಸೇರಿದವರೆಂಬ ಮುದ್ರೆಯನ್ನೊತ್ತಿದ ಹಾಗಾಯಿತು." 41

ಇಂತಹ ಕರಾಳ ಶಾಸನದ ತಾಯಿ ೧೮೫೭ರ ಶಾಸನ. ಈ ಶಾಸನವನ್ನೇ ಹಲಗಲಿಯ ಬೇಡರು ಪ್ರತಿಭಟಿಸಿ, ಪ್ರಾಣಗಳನ್ನರ್ಪಿಸಿ, ಸ್ವತಂತ್ರಭಾರತದ ಪ್ರೇಮ ಗೌರವಗಳಿಗೆ ಪಾತ್ರರಾದದ್ದು.

---

40 ". . . . The Arms Act of his Viceroyalty further outraged Indian opinion. It prevented Indians from carrying arms without government licence. The foreign nationals, Europeans, Eurasians, Anglo-Indians or 'any scum of earth' that the ocean cast on Indian shores were not affected by it. It made mischievous distinction between Indians and Europeans."

—*Indian Nationalist Movement and Thought* by Dr. V. P. S. Raghuvanshi, *p.* 36.

41 ". . . . . inaugurated a policy of mistrust and suspicion, utterly undeserved and strongly resented by our people, and it imposed upon us a badge of racial inferiority."

—Surendranath : *A Nation in Making*, *p.* 50.

# APPENDIX I.

## Translation of a declaration made in writing by Bhimrao, Gumastha of Mundargi Bhimrao, the late rebel, before the Deputy Commissioner, Raichur Doab, on the 4th June, 1858.

I am Bhimrao, Gumastha of the late rebel Mundargi Bhimrao. All that I am aware of regarding the previously concerted plans in connection with the getting up of this rebellion, I herein disclose.

(1) About three months ago the Nargund Raja first brought about the suggestion of rebelling against the State and in prosecution thereof first concerted with the Dummal Desai, then with the Humgee Desai and then got the advice of Mundargi Bhimrao who said what we will be able to do ? Then, the Nargund Raja replied that people of Thorgal and other places would join and that they will be able to bring together a great force. . . . . . . of the Dambal Desai then began collecting men in his *elakha* and Mundargi Bhimrao began at Hospet, Kamlapur and other places. When this was in progress, Bhimrao began to think of taking possession of the Jamma of Kopal and about two months ago sent for the son of Burma Naik Powar and made arrangements with him to get possession of Kopal by perfidious means. I was not present when this occurred, but Bhimrao subsequently informed me of this having taken place.

(2) The reason of the rebellion of the Nargund Rajah is the demand made for his arms. He sent word to Bhimrao Mundargi by his Sowar Busapah that the Company Circar had demanded the whole of the powder, etc., of the *Samsthan* and asked that if he gave up what his ancestors had accumulated, what would he then do ; and consequently determined to fight. This I heard at Bennihalli.

(3) The reason of Kenchangouda Desai of Hamgee and Mundargi Bhimrao joining and assisting Baba Sahib of Nargund is the idea that their weapons also would be taken away and they kept in confinement.

(4) Nargund Baba Sahib is the chief actor and mover in this rising and was joined by the Thorgal Rajah Venkappaiah, the Dumbal Desai, Humgee Desai and Bhimrao. I am ignorant of any other being concerned ; but I hear that Nargund Baba Sahib was in correspondence with Nana Saheb.

(5) The rising simultaneously of the whole of the above chiefs was to come off on the 27th May, 1858. The posts each was to hold were told off. Nargund Baba Sahib was to proceed towards the Navalgund and Dharwar sides, loot the large towns and become possessed of the fort of Navalgund. The Dumbal Desai was to loot Dambal and Gudduk.

(6) The Thorgal Rajah was to create a disturbance on his side and Bhimrao and Kenchangouda were to come towards Koppal and raid it. The Ramdurg Raja may be concerned with the Nargund Rajah, they being brothers; but I did not hear of such —owing to the arrival of Venkat Rao to join the Police of Gudduk from Dharwar Magistrate to sequestrate all the arms, etc., found in the possession of the Humgee Desai Kenchangouda. The rising which was previously consented to come after the 27th was premature and these two rose in arms on the 24th. The rock adjacent to Humgee was resorted to and 2 or 3 hundred men of the neighbouring villages brought together to visit the Dumbal Desai. But owing to his absence, the whole body started and encamped at night at the Hullah on the other side of Kavloor on the 25th May, 1858. That day the villagers supplied them. Gowda, the Patel of Cowroor visited Bhimrao, but he does not appear to have intrigued previously or subsequently. On the following day 26th May, 1858, we proceeded to . . . . . . of the Koppal taluka where Kanchapa Muddee Sivpur came to Bhimrao and promised, I believe, to collect a body of armed men. This Bhimaro informed me. It does not appear the villagers of Nagsanhalli and the neighbouring villages had anything to do in this rebellion. Subsequently, Bhimrao despatched a person of Budpanhalli to Burma Naik Powar Koppal, who sent a message by the said individual that he had the whole of the people tainted with treachery to give up Koppal which brought Bhimrao and Kenchangouda to Koppal and put them in possession thereof. I heard from Bhimrao that Kenchangouda and himself had proceeded to Koppal Modeen Naik's house and had got a promise from him to assist them in their purpose of resisting the Government. Since long Rajah Naik and Muktoom Modin Naik are implicated in this. Two months ago Bhimrao sent for Kenchappa Muddi of Sivpoor and Venkannah and sent them back with an injunction to make arrangements for bringing about armed men from Sivapur and other villages. Some days after, they returned and said that arrangements had been made for collecting a body of armed men and that the Anegundi Raja also appeared to be disposed to join in the rising. On hearing of this Bhimrao despatched his Karkun Nurhurry to Anegundi when the Raja of Anegundi sent a Jemdar to Bennihully who in concert with Bhimrao planned something. I was not present to hear of the conversation but heard from Bhimrao that plans had been made. The above-mentioned Nurhurry was sent from Kumarraman Kumta to Anegundi. A Jemdar from Anegundi Raja then arrived and on Bhimrao saying that people from this side had not come, he replied that he would have been joined by them had the Koppal Thana been taken and that he had further intrigued with the Mussalman of the Gangawati side. That Bhimrao should proceed that side, that he (Jemdar) with his people also would come there, plunder the treasury and then proceed to Koppal and take possession of the Thana of the said place. So saying he left; Bhimrao agreed upon going to Gangawati; but his family being at Koppal, the message received from there induced him at once to proceed thither.

(7) The Sawar Basappa that came from the Nargund Raja about 3 months ago said that the Jemdar of the Rissallah of

Dharwar and the Sawar of Belgaum and Kulladgee had been intrigued with by the Raja of Nargund.

(8) When Bhimrao came this side he despatched a sawar to the Nargund Raja and Dumbal Desai to commence their disturbances. With the intention of getting Hospeth, Kamlapur and other villages to join, Bhimrao sent for the Takur that remained in that place (Hospeth) in a Thakuah and gave him 500 rupees.

The above 8 paras, a portion of which I have written with my own hand and caused a part to be written, is given of my own accord.

(Sd.) .........................., *Deputy Commissioner*, Raichur Doab.

(Sd.) Bhim Rao, Gumastha Prisoner, True translation.

# APPENDIX II.

*No. 1488 of 1858.*

*Secret Department.*

To

H. L. Anderson, Esq.,
*Secretary to Government of Bombay.*

Dharwar, Magistrate's Office,
*Dated 28th September, 1858.*

Sir,

I have the honour to transmit for the information of His Lordship in Council the translation of a proclamation of which 12 copies have recently been found among the effects of the late Bhimrao of Mundargi.

2. It bears a striking resemblance to the proclamation that has been published as emanating from Nana Saheb and appears to have aimed at effecting a diversion in the South in favour of the rebels in the North of India.

I have etc.,
(Sd.) Ogilvy,
*Magistrate.*

## Proclamation.

From Dhondo Pant Nana Peishwa, Pant Pradhan to all the Suranjamdars, Jagirdars, Deshmukhs, Deshpandeys and other Jameendars, Patels, Kulkarnis, Naikwads, Shetsandees and the whole of the population of the Deccan and the Carnatick. It is ordered to be proclaimed that the English who are "Kaffirs" came to this country under pretence of carrying on trade. Afterwards instigating sedition among our Suranjamdars and practising treachery they seized all the Hindu and Mohammadan kingdoms, imprisoning some of the descendants of the former kings and driving others to beggary; they themselves enjoy the country. This is well-known to the whole of you.

The Kaffirs upon the strength of their acquisition of the empire have turned very arrogant and keeping up outward appearances of justice, have most unjustly destroyed life and acquired wealth and property. They have been endeavouring to delude and convert the population of this country inducing them to abandon their own religion and caste but having failed by mild means to do this they were about to use force.

Tyranny, wickedness and injustice having been much practised by the Kaffir (English) on the faithful and sin-fearing, I have been commissioned by God to punish the Kaffirs annihilating them and to re-establish the Hindu and Mahammadan kingdoms as formerly and to protect our country as I have conquered the country North of the Nurbuda river.

To submit to and live under such wicked Kaffirs is very disgraceful. So immediately on the perusal of this proclamation you are bravely to take up your swords and without mercy destroy the kaffirs. By this you will gain merit and show your manliness and your courage will be proved.

Ye heroes! this is the best time for you to avenge the wrongs and wickedness perpetrated by the Kaffir English on your land and on your kings. By allowing such an opportunity to escape do not suffer the stain of being effeminate and foolish to attach to the people of the South. At the present time the English having disagreements among themselves about their religion are quarrelling and fighting and killing each other. The French and the Russians who entertained from a long time a hatred against the English and a design to turn them out of Hindustan have thought this a proper time to carry it out and with this intention they have been sending armies by sea these three months past. The Chinese also have declared war against these kaffirs and the latter having no army to send against the Chinese are much alarmed. The Persians, Afghans and Ballochees moreover, are ready with their armies collected to aid us. In short, this is the golden time to root out completely the English from this country. The Kaffir English in order to discourage the population, fabricate false information of their having retaken Delhi and other places and having defeated us and make it known among the public; but such ought not to be believed. If you allow this time to escape, all of you will be liable to punishment from us and for that guilt whatever Jageers, lands, and other subsistence you may possess will be brought under attachment. This proclamation is published by the Order of Ullu Shah Bundeegah Ullu Hozoor, the Emperor of Delhi.

By Rao Pant Pradhan Peshwa,

True translation,

(Sd.) Ogilvy,

*Magistrate.*

---

# APPENDIX III.

*No. 183 of 1858.*

FROM

R. N. TAYLOR,
*District Collector,*
*Raichur District.*

To

DISTRICT MAGISTRATE, DHARWAR.

*Letter dated 24th July 1858.*

"Descriptive roll of the prisoners in Raichur District Jail".

Prisoners taken during the rebellion at Koppal and tried by Court Martial.

*Prisoners shot by musketry—77.*

| | | | | | |
|---|---|---|---|---|---|
| Kurlahalli | ... | 28 | Bagwarie | ... | 4+1 |
| Hummige | ... | 11 | Kukkanoor | ... | 2 |
| Gangapur | ... | 1 | Kundgal | ... | 1 |
| Woddarahally | ... | 3 | Yesoor | ... | 5 |
| Singtaloor | ... | 2 | Kumpy | ... | 1 |
| Nulvi | ... | 1 | Betgeri | ... | 1 |
| Hebnur | ... | 2 | Handiganoor | ... | 1 |
| Harpanahally | ... | 1 | Bannoor | ... | 1 |
| Mundurgi | ... | 1 | Bankapur | ... | 1 |
| Talwargee | ... | 1 | Navalgund | ... | 1 |
| Harygarry | ... | 1 | Illegible | ... | 5 |
| Venkatapur | ... | 1 | | | |

| | | | | |
|---|---|---|---|---|
| 10 | persons | sentenced to | 1 year's | R.I. |
| 7 | ,, | ,, | 5 years' | ,, |
| 2 | ,, | ,, | 14 years' | ,, |
| 38 | ,, | ,, | 14 years' | ,, |
| 2 | ,, | ,, | 1 year's | ,, |
| 1 | ,, | ,, | 5 years' | ,, |

1. Mucktoom Mohideen . . . . . . to be hung.

The property of the prisoners was also confiscated under Act XI of 1857.

# APPENDIX IV.

## Bhima Rao's Rising in 1858.

" The last occasion on which the help of troops was necessary was Mundrigi Bhima Rao's rising in 1858. This Bhima Rao had been Tahsildar of Harpanahalli and of Bellary, but had been dismissed in 1854 for a series of underhand intrigues against the Huzur Sheristadar and other leading native officials. He was no ordinary Tahsildar, but a man of some landed property at Mundrigi in Dharwar, a keen sportsman, and possessed of great powers of personal influence. His rising is recounted in a ballad which is sung to this day in the western taluks. The unrest occasioned by the Mutiny of 1857 had spread to Dharwar and the country adjoining and the authorities had made vigorous searches for arms which had disquieted the desayis of Damal, Hammigi and Toragal. They accordingly plotted with Bhima Rao to bring about a general rising on the 27th May 1858. On the 24th a party of police arrived to search the Hammigi Desayi's house for weapons and ammunition and accordingly he and Bhima Rao took up arms prematurely. They threatened Ramandrug, but the Tungabhadra was full and they never actually crossed it. They captured the fort of Kopal, some 26 miles from Hospet, and took up their stand there. A company of the 74th Highlanders, two companies of the 47th Native Infantry and a squadron of the 5th Light Cavalry, with two guns and some Mysore irregular horse, set out from Bellary to Kopal and were joined there by other troops from across the river. On the 30th May some shots were exchanged with the fort and the next day a breach was made and the place was stormed. The rebels showed fight, but were driven back towards the citadel at the top of the fort, about 100 of them being killed on the way. Bhima Rao and the Desayi of Hammigi were among these. While preparations were being made to blow up the gate which checked further advance the remainder of the insurgents surrendered. Seventy-seven of them were subsequently executed and no more trouble occurred. The loss on the Company's side in the attack was seven Europeans and one native wounded.

—*Madras District Gazetteer, Bellary*, by W. Francis, Pp. 50-51.

# APPENDIX V.

*G. I. No. 1285.*

*No. 770.*

*Registered, 2nd November 1858.*

NUGGUR DIVISION,
SUPERINTENDENT'S OFFICE.

FROM

MAJOR J. T. PORTER,
*Superintendent of the Nuggur Division.*

To

THE MAGISTRATE OF DHARWAR.

SIR,

With reference to your letter of the 20th July last, No. 1063, I have the honour to inform you that the sale of the property of the late rebel Bhimrao of Mundargi has produced Rs. 4,101-13-6 and to request that you will have the goodness to let me know how the carriage expenses of the same as far as Rani Bidnoor to the Amildar of which Taluk I propose remitting it on account of your treasury, should be defrayed.

I have the honour to be,
Sir,
Your most obedient servant,

(Sd.) J. T. PORTER,
*Superintendent.*

SHEMOGAH,
28*th October*, 1858.

---

# APPENDIX VI

## ಮುಂಡರಗಿ ಭೀಮರಾಯನ ಬಂಡಾಯದ ಲಾವಣಿ

ಚನ್ನಪಟ್ಟಣದೊಳು ಹೊನ್ನೆಭರತಪುರ
ಪುಣ್ಯಶಹರ ಡಿಲ್ಲಿ ಒಳಗೆ
ಮೀರಿದ ದೊರೆಗಳ ಜಗಳದ ಒಳಗೆ
ಸೋತು ಸೆರೆ ಆಳುವರಿಂದೀಗೆ
ಟೀಪು ಎಂದರಂತೆ ಭೂಮಿಗೆ
ಹೆಸರಿಗೆ ಕಿಲ್ಲೇಶ ಕಟ್ಟಿಸಿದವಂಗೆ
ಕೋಟಿಪಾಲಿಗೆ ಶಾಟಿ ಉಂಟಿ
ಹೊಸ ಕೀಟಕ ಭೀಮರಾಯ ಧೊರೆಯು. ॥ ೧ ॥

ಸಾರಿಹೇಳಿದ ಹನ್ನೆರಡು ಘಂಟೆಗೆ
ಸೂರೆಮಾಡಿದ ಭೀಮರಾಯ ಧೊರೆಯಾ
ಧೀರ ಕುಂಪಣಿ ಸರದಾರ ಟೇಲರ ಸಾಹೇಬ
ಗ್ಯಾರು ಸರಿಯೋ ಧರೆಯೊಳಗೇ ? ॥ ೨ ॥

ದೇಶದೇಶದೊಳು ಎಲ್ಲ ಕುಂಪಣಿ ಹುಕುಂ ಮಾಡಿದರು
ದೊಡ್ಡ ದೊಡ್ಡ ಕಿಲ್ಲೆಗಳನ್ನು ಕೆಡಿಸಿದರು
ಮೀರಿದ ಧೊರೆಗಳ ಸೆರೆಹಾಕಿದರು
ತಪ್ಪಿರೆ ಸಿಗದ ಶಿವನಬಿಡದಿಹರು
ಧರ್ಮರಾಜ್ಯವನ್ನಾಳುವರು ಹಮ್ಮಿಗೆ
ದೇಸಾಯಿರು ಇದು
ತಿಳಿದು ತಿಳಿದು ಹಗೆ ಮಾಡಿದರು
ಧೀರ ಕುಂಪಣಿ ಸರದಾರ ॥ ೩ ॥

ಮದ್ದುಗುಂಡು ಸೋರುಪ್ಪುಗಂಧಕ
ಇದ್ದಡಗಿಸಿಕೊಂಬುವರು
ಭಾರಿ ಶಿಕ್ಷೆಗೆ ಒಳಗಾಗುವರು
ಕುಂಪಣಿಯವರು ಸಾರಿ ಹೇಳಿದರು
ದೇಶವ ಮದ್ದು ಗುಂಡು ಕೊಂಡರು
ಮದ್ದುಗುಂಡು ಕಠಾರಿ ಕತ್ತಿ
ನಿಮ್ಮಲ್ಲಿದ್ದರೆ ಕೊಡರೆಂದರು
ಧೀರಕುಂಪಣಿದಾರ ॥ ೪ ॥

ಹೇಳಿದ ಮಾತನು ಕೇಳದೆ ಎನ್ನೊಳು
ಬಾಳಬ್ಯಾಡೋ ತುಸು ನೀನು

ಹುಲುಬಿಸಿಕೊಟ್ಟರೆ ಶಿಕ್ಷಕ ನಾವು ಪಾತ್ರರು
ಅನಲಿಕ್ಕೆ ಬಿಟ್ಟರು ತಾವು.
ಅವರಲಿ ಬಹಳ ಆಯುಧ ಇದ್ದವರು
ಶ್ಯಾನುಭೋಗ ತಿಳಿದು ಬರೆದ ಉತ್ತರವು
ಧಾರವಾಡಕೆ ಉತ್ತರ ಮುಟ್ಟಲು ಕುದುರೆ ಬಂದವು
ಧೀರ ಕುಂಪಣಿ ಸರದಾರ. ॥ ೫ ॥

ಎಲ್ಲಿ ಹಮ್ಮಿಗೆ ಎಲ್ಲಿ ದೇಸಾಯಿ ಎಲ್ಲಿ ಮದ್ದುಗುಂಡು
ಎನುತ ಠಾಣ ಪೋಲೀಸ ಬಂದನು ನಗುತ
ಕರಸಿದ ಶ್ಯಾನುಭೋಗನೂರ ಹೊಗುತ
ತೋರಿಸು ಮದ್ದುಗುಂಡು ಎಮಗೆಂಬುತ
ದೇಸಾಯಿ ಒಳಗೆ ಬಂದರು ಬಹು ತುರ್ತು
ಮೆಲ್ಲಕೆ ಇವರು ಕೊಲ್ಲಲಿಕ್ಕೆ ಬಂದರೆಂದು
ಓಡ್ಯಾನು ದೇಸಾಯಿ ಅಳುತ
ಧೀರಕುಂಪಣಿ ಸರದಾರ ॥ ೬ ॥

ಬಣ್ಣಗುಂದಿ, ಮಾರಿ ಸಣ್ಣಮಾಡಿಕೊಂಡು ಬೆಣ್ಣಿಹಳ್ಳಿಗೋಡಿಹೋಗಿ
ಭೀಮರಾಯಗೆ ಹೇಳುತಾನೆ ಶಿವಾ ಶಿವಾ ಎಂದು
ಸಾವಿನಕಾಲ ಬಂತೆಂದು
ಆಗ ವರ್ತಮಾನ ಇಂತೆಂದು
ತಿಳಿಸಿದ ಕಣ್ಣತುಂಬ ನೀರತಂದು
ಎನ್ನದು ಹಣಗಳು ನಿನ್ನದು ಮರಣವು
ಅನಲಿಕ್ಕೆ ನಿನಗೆ ಬಯವು ಬೇಡೆಂದು
ಧೀರಕುಂಪಣಿ ಸರದಾರ ॥ ೭ ॥

ಕಷ್ಟಬಂದಕಾಲಕ ಮಾತುಗಳೆಷ್ಟಾದರೂ ಆಡಬಹುದು
ಮರಣಬಂದಕಾಲಕ ಇದು ಇರದು
ಕುಂಪಣಿಯವರಮೇಲೆ ಕತ್ತಿಹಿಡಿದು
ಹೊರಟನು ಟೀಪು ಬರು ಭಾರಮುಂದು
ನನ್ನಿಂದೇನಾಗುವುವೆಂದರಿದು
ದಿಟ್ಟ ಭೀಮರಾಯ ಮುಟ್ಟಿ ಹಣೆಯ
ಅದೃಷ್ಟವೆಂದು ಮೀಸೆ ಮುಂದು
ಧೀರ ಕುಂಪಣಿ ಸರದಾರ ॥ ೮ ॥

ಬಿಡು ಬಿಡು ದೇಸಾಯಿ ಹಿಡಿ ಹಿಡಿ ಕತ್ತಿ
ನಡಿ ನಡಿ ಕುದುರೆಯನು ಏರು
ಇರುತರಿ ಭಂಟರನು ಕರೆಸಿದನು

ಹಮ್ಮಿಗೆ ಮರ ಆ ಕ್ಷಣಕೆ ಹೊಕ್ಕನು
ಶ್ಯಾನುಭೋಗನ ಕಿವಿ ಮೂಗು ಕೊಯ್ದಾನು
ಬಂದ ಸವಾರನ ಕಡಿದು ಬಡಿದು
ದುಮ್ಮು ದುಡುಕು ಮಾಡಿದನು
ಧೀರ ಕುಂಪಣಿ ಸರದಾರ ||೯||

ಕೊರತಿ ಇಲ್ಲದ ಹಣ ಭರತಿ ಚಕ್ಕಡಿ
ತಿರಗಳಿದವು ಎತ್ತುಗಳು
ಹೋಗಿ ಹೊಕ್ಕನು ಡಂಬಳದೊಳು
ಸುಲಿಗೆ ಮಾಡಿ ತೆಗೆದ ಹಣಗಳು
ಹಾರುವಗೇರಿ ಬಡಿದ ಹಗಲೊಳು
ತಾಲೂರುಮೇಲೆ ಇಳಿದ ಇರುಳೊಳು
ಹೊರಸಾಗಿ ತಾ ದಾರಿಹಿಡಿದು
ಏರಿಕುಂತನು ಕುಮ್ಮಟದೊಳು
ಧೀರ ಕುಂಪಣಿ ಸರದಾರ ||೧೦||

ಗಜಬಿಜಿ ಆದಿತು ನಿಜವಿದು ಭೀಮರಾಯ
ತಜವೀಜು ಮಾಡಿದನೆಂದನು
ಪ್ರಜೆಗಳು ಅತಿಭಯಗೊಂಡು
ಲಿಂಗಸೂರು ಲಾವಣಿ ಭುಗಿಭುಗಿಲೆಂದು
ಭೀಮರಾಯರ ಹೆಂಡರ ಇಬ್ಬರಳ ಹಿಡಿತಂದು
ಕೊಪ್ಪಳ ಕಿಲ್ಲೆದಲ್ಲಿ ಇಟ್ಟರೆಂದು
ಕಾಳಯುಕ್ತ ಸಂವತ್ಸರ ಅಧಿಕ
ಬಹುಳ ತಿಥಿ ಮುಂದೊಂದು
ಧೀರ ಕುಂಪಣಿ ಸರದಾರ ||೧೧||

ಹೆಂಡರ ಸೆರೆಯನು ಕಂಡು ಬದುಕುವನು
ಬಂಡ ಭೀಮರಾಯ ತಾನು
ರಾತ್ರೀಲೆ ಗುಮುಟ ಬಿಟ್ಟು ಹೊರಟಾನು
ಬೆಳಗಿನ ಝಾವದಲಿ ಬಂದಾನು
ಕೊಪ್ಪಳ ಅಗಸಿಯನು ಮುರಿದಾನು
ಹೆಂಡರು ಮಕ್ಕಳನ್ನು ಕೂಡಿದನು
ಒಳಗೆ ಸಿಕ್ಕಿ ಜನರಿಗೆಲ್ಲ ಜುಲಿಮಿಲಿ
ಸಂಬಳ ಗೊತ್ತುಮಾಡಿದನು
ಧೀರ ಕುಂಪಣಿ ಸರದಾರ ||೧೨||



ನರಗುಂದದ ದೇಸಾಯಿ ಬಾಬಾ ಸಾಹೇಬ

[' ಮಿಂಚಿನಬಳ್ಳಿ ', ಧಾರವಾಡ—ಈ ಸಂಸ್ಥೆಯವರ ಕೃಪೆಯಿಂದ.



ಕೊಪ್ಪಳದ ಕೋಟೆ

[ರಾಯಚೂರು ಜಿಲ್ಲಾ ಕಲೆಕ್ಟರ ಕೃಪೆಯಿಂದ.

ಭೀಮರಾಯ ಕೊಪ್ಪಳಕೆ ಬಂದಾನೆಂದು
ಆಗ ಬರೆದನು ಸುಭೇದಾರ
ಲಿಂಗಸೂರ ಛಾವಣಿ ಇತ್ತೊ ಸಾವಿರಾ
ತುರ್ತಿನಮಂದಿ ತಂದಾ ಸರದಾರ ಕೊಪ್ಪಳ ಸುತ್ತ
ಕುದುರೆಯ ವ್ಯಾಪಾರ
ನಾಲ್ಕುಕಡೆ ತೋಪು ತಯಾರ
ಹೊಡಿಹೊಡೆದನು ನೆಲೆಯಿಲ್ಲದ ಗುಂಡು
ಕಿಲ್ಲೆಮಾಡಿದನು ದೂರ ದೂರಾ
ಧೀರ ಕುಂಪಣಿ ಸರದಾರ ॥ ೧೩ ॥

ದಡಬಡದೊಳು ಎಂದು ಎಡಬಲಬಿಡದೆ
ಹೊಡೆವ ತೋಪುಗಳ ಗುಂಡು
ಹೊಡತಕ್ಕೆ ಕಿಲ್ಲೆವಾದೀತು ತುಂಡುತುಂಡು
ಹಮ್ಮಿಗೆ ದೇಸಾಯಿ ಭೀಮರಾಯಕಂಡು
ಗಚ್ಚಿನಕೋಟಿ ಹತ್ಯಾರೆ ಭಯಗೊಂಡು
ಕ್ಷಣಕ್ಷಣಕ್ಕೆ ಹಾರಲಿಲ್ಲ ಒಂದು ಗುಂಡು
ಧಡಭಡ ಆರ್ಭಟದೊಳು
ಒಳಗಡಿಗಿ ನಿಂತಿತು ಒಳಗಿನ ದಂಡು
ಧೀರ ಕುಂಪಣಿ ಸರದಾರ ॥ ೧೪ ॥

ಕೊಪ್ಪಳದೊಳಗಿನ ಸಪ್ಪಳ ಅಡಗಿತು
ನಿಪ್ಪಣಕಂಡ ಸರದಾರ
ಕರಕರ ಹಲ್ಲತಿಂದ ಭರ್ಭಾರ
ಅಲ್ಲೇ ಬಿಟ್ಟ ಕುಂಪಣಿ ವಾರಿಯವರ
ಫಡ ಫಡ ಗಂಡ ಸುಟ್ಟು ಮೇಲ್ತವರ
ಬೆನ್ನುಹತ್ತಿಕೊಂಡೆ ಮದ್ದೂರ
ಗಚ್ಚಿನಕೋಟೆಯೊಳು ಹಚ್ಚಿಹೊಡೆದನು
ಭೀಮರಾಯ ರಣಶೂರ
ಧೀರ ಕುಂಪಣಿ ಸರದಾರ ॥ ೧೫ ॥

ಪುಂಡಭೀಮರಾಯ ಕುಂಡಿಪೆಣ್ಣಿ
ಜೋಡ್ಗಿಂಡಿಸೆ ಕರ ಹಲ್ ಪಿಡಿದು
ಗುರ್ಜು ಅಗಸಿ ತಿರುವ ತೋಪು ಜಡಿದು
ಹೊರಗಿನಮಂದಿ ವ್ಯಾಲ್‌ಹಲ್ಗಡಿದು
ಹಸಿದ ಸಿಂಹದ್ಹಾಂಗ ಕೊಗೆ ಹೊಡೆದು
ಕೊಪ್ಪಳ ಮಂದಿ ಎಲ್ಲ ಭಯಪಿಡಿದು

ಎತ್ತಿಲ ನೀಡೋಲದ್ವೊತ್ತಿ ಕೊಂಡೀತೆಂದು
ಜನರು ಮೌನ, ಹಿಡಿದು
ಧೀರ ಕುಂಪಣಿ ಸರದಾರ ॥ ೧೬ ॥

ಕಾಲ ತುಳಿತದೊಳು ದೂಳ ಮುಸಕಿತು
ಕಾಳಗವಾದೀತು ಸೂರಾ
ಹಾಲಭಾವಿ ಕೋಟೆಯೊಳಗೆ ಸಂಹಾರಾ
ಎತ್ತಿ ಕಡಿವಂತ ಭಂಟರಾ
ಕಾರೊಳಗ ಬಿದ್ದ ನೋಡಿ ಹೊರಳುವರಾ
ಜಗಳದ ಹೋಲಿಕೆ ಮಾಡಿ ಕರ್ಣಾರ್ಜುನರಾ
ಹೇಳಬೇಕು ಸರಿ ಹಮ್ಮಿಗಿ
ದೇಸಾಯಿ ಭೀಮರಾಯರಾ
ಧೀರ ಕುಂಪಣಿ ಸರದಾರ. ॥ ೧೭ ॥

ಇಂದಿನ ಯುಗದೊಳು ಇಂದ್ರಜೀತು ರಾಮು
ಚಂದ್ರನ ಬಲಿ ಹೊಡೆದಂತೆ
ಅಂಗದ ರಾಕ್ಷಸನ ಬಲ ಹೊಕ್ಕಂತೆ
ಭೀಮರಾಯು ಜಗಳಮಾಡಿ ಹೋದಂತೆ
ಗುಂಡಿನಶಬ್ದ ಅಳ್ಳದುರದಂತೆ
ದೇಸಾಯಿಗೆ ಹೇಳತಾನೆ ಇಂತೆ
ಇಂದಿನ ದಿನ ಒಂದುಳಿದರೆ ನಮ್ಮದು ಮುಂದಿ
ಬಂದೀತು ನಮಗಿಲ್ಲವು ಚಿಂತೆ
ಧೀರ ಕುಂಪಣಿಸರದಾರ ॥ ೧೮ ॥

ಕಿತ್ತ ಕತ್ತಿ ಕೈ ಎತ್ತಿ ಸುತ್ತ ಮುತ್ತ
ಕೇಳುತಾನೆ ಭಂಟರನ
ಭೀಮರಾಯ ಕೂಡಿ ಹೊಡದಾ ರಣ ಶೂರಾ
ತಡೆಯದೆ ಹಾರುತಿದ್ದವು ಶಿರಾ
ತೆಯ್ಯುತೆಯ್ತೋ ಕೆಂಪು ನೆತ್ತರಾ
ಒಮ್ಮೆಗುಂಡು ಹಾಯೋ ಸಾವಿರಾ
ಹಮ್ಮಿಗೆ ದೇಸಾಯಿ ಭೀಮರಾಯ
ಅದೇಕ್ಷಣಕೆ ಸಂಹಾರಾ
ಧೀರ ಕುಂಪಣಿ ಸರದಾರ ॥ ೧೯ ॥

ಸತ್ತ ಭೀಮರಾಯ ಎತ್ತ ಹೋದನೆಂ
ದತ್ತರಲೆದ್ದ ಭಂಟಾರು
ಹೊತ್ತ ಕತ್ತಿ ತುಬಾಕಿಗಳ ಬಿಟ್ಟಾರು

ದೊಡ್ಡ ದೊಡ್ಡ ಓಣಿ ಹಿಡಿದು ಓಡಿದರು
ಹುಡ ಹುಡರಿ ತಂದ ಭಂಟರನು
ಹೆಡ ಮುರಿಗೆ ಕಟ್ಟಿ ಬಿಟ್ಟಾರು
ಹತ್ತು ಹತ್ತು ಮಂದಿನ್ನ ಕಣ್ಣು ಕಟ್ಟಿ
ಗುಂಡಿಲೆ ಹೊಡೆದು ಕೊಂದಾರು
ಧೀರ ಕುಂಪಣಿ ಸರದಾರ || ೨೦ ||

ಪೂರ್ವ ಜನ್ಮದೊಳು ಈರ್ವರು
ಆರದಾಕ್ಷಣ ಬಲ್ಲ ಇದನು
ಹವ್ಮಿಗೆ ದೇಸಾಯಿ ಭೀಮರಾಯರನು
ಕಾಲ್ಗಿಡಿದೆಳೆದು ತಂದ ಶವಗಳನು
ಟೇಲರ ಸಾಹೇಬ ಹುಕುಂ ಮಾಡಿದನು
ಗವಿಯ ಮಠದ ಬಯಲಿಗೆ ಎಳೆಸಿದನು
ಸುತ್ತಲೂ ಜನರು ನೋಡಿ ಮರುಗುತ
ಅಳುತಾರೆ ನೋಡಿ ಹೆಣಗಳನು
ಧೀರ ಕುಂಪಣಿ ಸರದಾರ || ೨೧ ||

ಅಯ್ಯಯ್ಯೊ ಎಂದು ಭೀಮರಾಯನ ಹೆಂಡರು
ಬಡಕೊಂಡರೋ ಹಣೆ ಹಣೆಯ
ಭೋರೆಂದಳುತ ಹೆಂಡರು ಕರಿಮಣಿಯ
ಕೊಲ್ಲುವರೇನೋ ಶಿವನ ಗುಣಮಣಿಯ
ಕಾಬುವನೇನೋ ಇನ್ನ ಇಂಥ ದೊರೆಯಾ
ಕಣ್ಣೀರು ಸುರಿಸುತಾರೆ ಹನಿ ಹನಿಯ
ಕೆಣಕು ಸರದಾರ ಕರುಣದಿ ಹಳುಹಲು
ಬೆಣ್ಣೆಹಳ್ಳಿ ಮನೆಯ
ಧೀರ ಕುಂಪಣಿ ಸರದಾರ || ೨೨ ||

ಯಾರು ಹೇಳಿದರು ಇವರೊಳು
ಫಿತೂರ ನಡೆದ ಸುದ್ದಿಗಳ ಇನ್ನು
ಟೇಲರ ಸಾಹೇಬನೆಲ್ಲ ಕೇಳಿದನು
ಮೊದೀನ ನಾಯಕರೆಂಬ ನಾಯಕರನು
ಧರೆಯ ಜಪ್ತಿ ಮಾಡಿಟ್ಟನು
ಬೇಡಿಯನ್ನು ಹಾಕಿಸಿದನು
ಬೆಣ್ಣೆ ಹಾಲು ಸವಿ ಉಣ್ಣವರಬಾಯಲಿ
ಹಿಡಿಮಣ್ಣು ಒಗೆಯಿರಿ ಎಂದನು
ಧೀರ ಕುಂಪಣಿ ಸರದಾರ || ೨೩ ||